ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೨೦

# ಕಣ್ಣು ಮತ್ತು ಅದರ ರಕ್ಷಣೆ

ಡಾ|| ಡಿ. ಶಾಮಣ್ಣ, ಬಿ.ಎ., ಎಂ.ಬಿ.,ಬಿ.ಎಸ್.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಚಾನ್ಸಲರವರಾದ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದೂರ್ ಅವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನು ಪಡೆದಿಲ್ಲದ, ಸಂಸ್ಥಾನದ ದೂರಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ವಿಶ್ವವಿದ್ಯಾನಿಲಯವು ಸ್ಥಾಪಿತವಾದಂದಿನಿಂದಲೂ ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚುಹಾಕಿಸಿದೆ; ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸ

ವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಆದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ಆಳಿದ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿದರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇ ಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು, ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು,
೧೫—೮—೧೯೪೦.

**ಎನ್. ಎಸ್. ಸುಬ್ಬರಾವ್.**

# ಪೀಠಿಕೆ

ಕೋಲಾರದಲ್ಲಿಯೂ ತಿರುಮುಕೂಡಲು ನರಸೀಪುರದಲ್ಲಿಯೂ ವಿಶ್ವವಿದ್ಯಾನಿಲಯದ ಅಧ್ಯಾಪಕಸಂಘದವರು ಏರ್ಪಡಿಸಿದ ಉಪನ್ಯಾಸಮಾಲೆಗಳಲ್ಲಿ ಕಣ್ಣಿನ ರಚನೆ ಮತ್ತು ಅದರ ರಕ್ಷಣೆಯ ವಿಚಾರವಾಗಿ ನಾನು ಕೊಟ್ಟ ಉಪನ್ಯಾಸಗಳನ್ನು ಈಗ ಪುಸ್ತಕ ರೂಪದಲ್ಲಿ ಪ್ರಕಟಿಸಿದೆ. ಇದನ್ನು ಬರೆಯಲು ನನ್ನನ್ನು ಪ್ರೋತ್ಸಾಹಿಸಿದ ಶ್ರೀಮಾನ್ ಜಿ. ಹನುಮಂತರಾಯರಿಗೂ ಬರವಣಿಗೆಯ ತೊಡಕುಗಳನ್ನು ಬಿಡಿಸಲು ಉಪಯುಕ್ತವಾದ ಸಲಹೆಗಳನ್ನು ಕೊಟ್ಟ ನನ್ನ ಮಿತ್ರರಾದ ಡಾ. ಎಸ್. ಶೇಷಾಚಾರ್ಯರಿಗೂ ನಾನು ಚಿರಋಣಿ.

**ಡಿ. ಶಾಮಣ್ಣ.**

# ವಿಷಯಾನುಕ್ರಮಣಿಕೆ

# ಕಣ್ಣು ಮತ್ತು ಅದರ ರಕ್ಷಣೆ

## ೧. ಪ್ರವೇಶ

ಮುಖಕ್ಕೆ ಕಾಂತಿಕೊಡುವುದು ಕಣ್ಣು. ಸೃಷ್ಟಿವೈಚಿತ್ರ್ಯವನ್ನೂ ಅದರ ಸೊಬಗನ್ನೂ ತೋರಿಸುವುದು ಕಣ್ಣು. ನಾವು ಆಹಾರವನ್ನು ಸಂಪಾದಿಸಿಕೊಳ್ಳುವುದಕ್ಕೂ ಅಪಾಯದಿಂದ ತಪ್ಪಿಸಿಕೊಳ್ಳುವುದಕ್ಕೂ ಜೀವನಸೌಕರ್ಯಗಳನ್ನು ರಚಿಸಿಕೊಳ್ಳುವುದಕ್ಕೂ ಕಣ್ಣು ಅತಿಮುಖ್ಯವಾದ ಸಾಧನ. ಇಂಥ ಕಣ್ಣನ್ನು ಕಳೆದುಕೊಂಡವರನ್ನು ನೋಡಿದರೆ ಯಾರಿಗೆತಾನೆ ಮರುಕ ಹುಟ್ಟುವುದಿಲ್ಲ. "ಕಣ್ಣಿಲ್ಲದ ಕಪೋತಿಯಮ್ಮಾ" ಎಂಬ ಆರ್ತಸ್ವರವನ್ನು ಕೇಳಿದಾಗ ಕಲ್ಲುಬಂಡೆಯಂಥ ಹೃದಯವಾದರೂ ಕರಗುವುದು. ಒಮ್ಮೊಮ್ಮೆ ಈ ಕುರುಡನಿಗೆ ಕಣ್ಣು ಹೋಗದಂತೆ ಮಾಡಬಹುದಾಗಿತ್ತೇ, ಇವನಿಗೆ ಸ್ವಲ್ಪಮಟ್ಟಿಗಾದರೂ ಕಣ್ಣು ಕಾಣುವಂತೆ ಮಾಡಬಹುದಾಗಿತ್ತೇ ಎಂಬ ಪ್ರಶ್ನೆಗಳು ಕೂಡ ನಮ್ಮ ಮನಸ್ಸಿನಲ್ಲಿ ಹುಟ್ಟುವುದುಂಟು. ಈಗ ಕುರುಡರಾಗಿರುವವರಲ್ಲಿ ಬಹು ಜನರು ಅಂಧರಾಗದಂತೆ ತಡೆಯಬಹುದಾಗಿತ್ತು. ಅದು ಆಗದಿದ್ದುದು ಮುಖ್ಯವಾಗಿ ಜನರ ಅಜ್ಞಾನದಿಂದ, ಅಜಾಗರೂಕತೆಯಿಂದ. ಪೋಷಕರು, ಅದರಲ್ಲೂ ಮಾತೆಯರು, ಮಕ್ಕಳ ಕಣ್ಣನ್ನು ಹೇಗೆ ಕಾಪಾಡುವುದು, ಅವಕ್ಕೆ ಕಣ್ಣು ನೋವು ಬಂದಾಗ ಹೇಗೆ ನೋಡಿಕೊಳ್ಳಬೇಕು ಎಂಬುದನ್ನು ಸ್ವಲ್ಪಮಟ್ಟಿಗಾದರೂ ಅರಿತಿದ್ದರೆ ಬಹುಶಃ ಕುರುಡತನದ ಕಷ್ಟಗಳು ಕೊರಗುಗಳು ಇಷ್ಟಾಗಿ ಇರುತ್ತಿರಲಿಲ್ಲ. ಇಂಥ ಅರಿವನ್ನು ಉಂಟುಮಾಡುವುದೇ ಈ ಪುಟ್ಟಪುಸ್ತಕದ ಉದ್ದೇಶ.

ಕಣ್ಣಿನ ರೋಗಗಳನ್ನೂ ಅದರ ನಿವಾರಣೋಪಾಯಗಳನ್ನೂ ತಿಳಿಯಬೇಕಾದರೆ ಅದರ ರಚನೆಯನ್ನು ಸ್ಥೂಲವಾಗಿಯಾದರೂ ಪರಿಚಯಮಾಡಿಕೊಳ್ಳುವುದು ಅತ್ಯಾವಶ್ಯಕ. ಅದರ ರಚನೆಯನ್ನು ವಿವರಿಸುವಾಗ ಕೆಲವು ಅಪರಿಚಿತವಾದ ಪದಗಳನ್ನು ಅಂದರೆ ಪಾರಿಭಾಷಿಕ ಪದಗಳನ್ನು, ಉಪಯೋಗಿಸಬೇಕಾಗುವುದು. ಇವನ್ನು ನೋಡಿ ವಾಚಕರು ಪುಸ್ತಕವನ್ನು ಓದಲು ಹಿಂಜರಿಯಕೂಡದು. ನಾವು ಕೆಲವರನ್ನು ಮೊಟ್ಟಮೊದಲು ನೋಡಿದಾಗ ಅವರ ರೂಪರೇಖೆಗಳೂ ನಡೆನುಡಿಗಳೂ ವಿಚಿತ್ರವಾಗಿ ಕಾಣಬಹುದು. ಆದರೆ ಅವರ ಪರಿಚಯವಾದ ಮೇಲೆ ನಮಗೆ ಅವರು ಆಪ್ತರೂ ಆಪದ್ಬಾಂಧವರೂ ಆಗುವುದುಂಟು. ಪಾರಿಭಾಷಿಕಶಬ್ದಗಳು ಇವರನ್ನು ಬಹು ಮಟ್ಟಿಗೆ ಹೋಲುವುವು; ಮೊದಲಲ್ಲಿ ಕಷ್ಟಕೊಟ್ಟರೂ ಸ್ವಲ್ಪ ಪರಿಚಯವಾದ ಮೇಲೆ ಸೌಲಭ್ಯಕಾರಿಗಳಾಗುವುವು.

# ೧. ಕಣ್ಣಿನ ರಚನೆ

ಕಣ್ಣುಗಳು ಬಹು ಸೂಕ್ಷ್ಮವಾದ ಅಂಗಗಳು. ಆದುದ ರಿಂದ ಇವು ಸುಲಭವಾಗಿ ಅಪಾಯಕ್ಕೆ ಒಳಗಾಗದಂತೆ ಪ್ರಕೃತಿ ಮಾತೆಯು ಇವನ್ನು ಸುರಕ್ಷಿತವಾದ ಆವರಣದಲ್ಲಿ ಇಟ್ಟಿರು ತ್ತಾಳೆ. ಕಣ್ಣುಗಳಿರುವುದು ಗಟ್ಟಿಯಾದ ಎಲುಬಿನ ಗೂಡುಗ ಳಲ್ಲಿ. ಅವುಗಳ ಸಮೀಪದಲ್ಲಿ ಏಟು ತಾಕಿದರೂ ಮೊದಲು ಹುಬ್ಬಿನ ಅಥವಾ ಕೆನ್ನೆಯ ಎಲುಬುಗಳಿಗೆ ಏಟು ತಾಕುವುದು. ಕಣ್ಣುಗಳಿಗೆ ನೇರವಾಗಿ ಏಟು ತಾಕುವುದು ಅಪರೂಪ. ಒಂದು ಪಕ್ಷ ಹಾಗೆ ಏಟು ಬಿದ್ದರೂ ಅವು ಸುಪ್ಪತ್ತಿಗೆಯಂಥ ಮೃದುವಾದ ಮೇದಸ್ಸಿನ ಮೆತ್ತೆಯ ಮೇಲಿರುವುದರಿಂದ ಅವಕ್ಕೆ ಅಷ್ಟು ಜೋರಾಗಿ ಏಟು ಬೀಳುವುದಿಲ್ಲ. ಕಣ್ಣಿನೊಳಕ್ಕೆ ಕಶ್ಮಲವು ಬೀಳದಂತೆ ತಡೆಯಲು ಸುಲಭವಾಗಿ ಮುಚ್ಚಿ ತೆಗೆ ಯುವ ಬಾಗಿಲುಗಳಂತೆ ರೆಪ್ಪೆಗಳಿವೆ. ರೆಪ್ಪೆಗಳ ಅಂಚಿನಲ್ಲಿ ಕೊಂಡಿಗಳಂತೆ ಬಗ್ಗಿರುವ ಕೂದಲುಗಳಿವೆ. ಇವು ಕೂಡ ರಕ್ಷ ಣಸಾಧನಗಳೇ ; ಕಣ್ಣಿನೊಳಕ್ಕೆ ಧೂಳು ಬೀಳದಂತೆ ಸ್ವಲ್ಪ ಮಟ್ಟಿಗೆ ತಡೆಯುವುವು. ಆಕಸ್ಮಿಕವಾಗಿ ಧೂಳು ಕಣ್ಣಿನೊಳಗೆ ಬಿದ್ದರೆ ಅದನ್ನು ಹೊರಗೆ ಹಾಕಿ ಕಣ್ಣನ್ನು ಕಾಪಾಡುವ ಸಾಧನ ಇನ್ನೊಂದಿದೆ. ಇದೇ ಕಣ್ಣೀರು. ಇದು ಗುಡ್ಡೆಯ ಮೇಲ್ಗಡೆ ಇರುವ ಗ್ರಂಥಿಗಳಲ್ಲಿ ಉತ್ಪತ್ತಿಯಾಗಿ ಗುಡ್ಡೆಯನ್ನು ಯಾವಾಗಲೂ ತೇವವಾಗಿಟ್ಟಿರುವುದಲ್ಲದೆ ಕಸ ಕಡ್ಡಿ ಧೂಳು ಮುಂತಾದವು ಕಣ್ಣಿನಲ್ಲಿ ಬಿದ್ದಾಗ ಹೆಚ್ಚು ಹೆಚ್ಚಾಗಿ ಉತ್ಪತ್ತಿ ಯಾಗಿ ಅವನ್ನು ಹೊರದೂಡುತ್ತದೆ. ಕಣ್ಣೀರು ಬಹುವಾಗಿ ಉತ್ಪತ್ತಿಯಾದರೆ ಅದು ಕಣ್ಣಿನ ಒಳಭಾಗದಿಂದ ಮೂಗಿನೊಳಗೆ




ಚಿತ್ರ ೧ ಕಣ್ಣಿನ ಅಡ್ಡಕಂಡು (ತುಂಡ)

ಇಳಿದು ಹೋಗುವುದೂ ಉಂಟು. ಇದಿಷ್ಟು ಕಣ್ಣುಗುಡ್ಡೆಗಳಿರುವ ಸನ್ನಿವೇಶದ ವಿವರಣೆ.

ಇನ್ನು ಕಣ್ಣುಗುಡ್ಡೆಯನ್ನೇ ತೆಗೆದುಕೊಳ್ಳೋಣ. ಇದು ಗೋಲಿಯಂತೆ ಗುಂಡಾಗಿದೆ. ಮೂರು ಕವಚಗಳನ್ನೊಳಕೊಂಡಿದೆ. ಹೊರ ಕವಚದ ಮಧ್ಯ ಭಾಗವು ಕರಿಯದಾಗಿ ಕಾಣುತ್ತದೆ; ಸುತ್ತಲೂ ಬಿಳುಪಾಗಿದೆ. ಬಿಳಿಯ ಭಾಗವನ್ನು ಬಿಳಿಯ ಗುಡ್ಡೆಯೆಂದೂ, ಕರಿದಾಗಿ ಕಾಣುವುದನ್ನು ಕರಿಯ ಗುಡ್ಡೆಯೆಂದೂ ಕರೆಯುವುದು ವಾಡಿಕೆಯಾಗಿದೆ. ಆದರೆ ಕರಿಯದಾಗಿ ಕಾಣುವ ಭಾಗವು ನಿಜವಾಗಿಯೂ ಆ ಬಣ್ಣವನ್ನು ಹೊಂದಿರುವುದಿಲ್ಲ. ಆ ಬಣ್ಣವು ಅದರ ಒಳಗಿನ ಕವಚಕ್ಕೆ ಸೇರಿದುದು. ಕರಿಯಗುಡ್ಡೆಯ ಮೂಲಕ ಬೆಳಕು ತೂರುವುದು. ಆದರೆ ಬಿಳಿಯಗುಡ್ಡೆಯ ಮೂಲಕ ತೂರಲಾರದು. ಅಂದರೆ ಇದು ಪಾರದರ್ಶಕವಲ್ಲ. ಕಣ್ಣಿನೊಳಕ್ಕೆ ಬೆಳಕು ಹೋಗುವುದೇನಿದ್ದರೂ ಕರಿಯಗುಡ್ಡೆಯ ಮೂಲಕವೇ. ಇದು ಮುಂಭಾಗದಲ್ಲಿ ಸ್ವಲ್ಪ ಉಬ್ಬಾಗಿರುವುದರಿಂದ ಇದರ ಮೂಲಕ ಹೋಗುವ ಬೆಳಕು ಸ್ವಲ್ಪ ಬಾಗುವುದು.

ಮಧ್ಯಕವಚವು ರಕ್ತನಾಳಗಳಿಂದ ಕೂಡಿದ ಬಣ್ಣದ ಕವಚ. ಇದರ ಮುಂಭಾಗವು ಚಿತ್ರದಲ್ಲಿ ತೋರಿಸಿರುವಂತೆ ಪಾಕ್ಷ್ಮಿಕಾವಯವವಾಗಿಯೂ, ಪಾಪೆಯ ವಪೆಯಾಗಿಯೂ ಮಾರ್ಪಟ್ಟಿರುತ್ತದೆ. ಪಾಕ್ಷ್ಮಿಕಾವಯವದವರೆಗೂ ಈ ಕವಚವು ಬಿಳಿಯ ಗುಡ್ಡೆಯ ಒಳಭಾಗಕ್ಕೆ ಅಂಟಿಕೊಂಡಿರುತ್ತದೆ. ಇದರಿಂದ ಮುಂಭಾಗಕ್ಕೆ ಹರಡಿರುವ ಈ ಕವಚದ ಭಾಗಕ್ಕೆ ವಪೆಯೆಂದು ಹೆಸರು. ಇದು ವರ್ತುಳಾಕಾರವಾಗಿದೆ. ಇದನ್ನು ನಾವು ಕರಿಯ ಗುಡ್ಡೆಯ ಹಿಂದೆ ನೋಡಬಹುದು. ವಪೆಯ




d ಪಾಪೆ

ಚಿತ್ರ ೨ ಕಣ್ಣುಗುಡ್ಡೆಯ ಮುಂಭಾಗ

ಮಧ್ಯದಲ್ಲಿ ಗುಂಡಾಗಿರುವ ಸಣ್ಣ ರಂಧ್ರವಿದೆ. ಇದೇ ಪಾಪೆ. ಪಾಪೆಯನ್ನು ಅಗಲವಾಗಿಯೂ ಕಿರಿದಾಗಿಯೂ ಮಾಡುವ ಶಕ್ತಿ ಪಪೆಗಿದೆ. ವಸ್ತುವನ್ನು ನೋಡಲು ಹೆಚ್ಚು ಬೆಳಕು ಬೇಕಾದಾಗ ಪಾಪೆಯು ಅಗಲವಾಗುವುದು. ಬೆಳಕು ಕಡಮೆ ಯಾಗಿ ಬೇಕಾದಾಗ ಕಿರಿದಾಗುವುದು. ಹೀಗೆ ಸಂಕೋಚ ವಿಕಾಸವಾಗುವುದು ಪಪೆಯ ಸ್ನಾಯುಗಳ ಸಹಾಯದಿಂದ. ಮಧ್ಯದ ಕವಚದ ಹಿಂದೆ ಸೂಕ್ಷ್ಮವಾದ ಒಂದು ನರಗಳ ಕವಚವಿದೆ. ಇದೇ ಚಿತ್ರದಲ್ಲಿ ತೋರಿಸಿರುವ ಜಾಲಪಟಲ. ಕರಿಯ ಗುಡ್ಡೆಯ ಮತ್ತು ಪಾಪೆಯ ಮೂಲಕ ಬಂದ ಬೆಳಕು ಇದರ ಮೇಲೆ ಬಿದ್ದು ಕಣ್ಣಿನ ನರವನ್ನು ಉತ್ತೇಜನಗೊಳಿಸಿ ಆ ಮೂಲಕ ಮೆದುಳನ್ನು ಮುಟ್ಟಿದಾಗ ನಮಗೆ ಪದಾರ್ಥಗಳ ದರ್ಶನವಾಗುತ್ತದೆ. ಜಾಲಪಟಲದ ಮೇಲೆ ಬೀಳುವ ಪ್ರತಿ ಬಿಂಬವೂ ತಲೆಕೆಳಗಾಗಿರುತ್ತದೆ ಮತ್ತು ನಾವು ನೋಡುವ ವಸ್ತುವಿಗಿಂತ ಬಹಳ ಕಿರಿದಾಗಿರುತ್ತದೆ. ಪ್ರತಿಬಿಂಬವು ಹೀಗಿ ದ್ದರೂ ನಾವು ಪದಾರ್ಥಗಳನ್ನು ಮಾತ್ರ ಹೆಚ್ಚುಕಡಮೆ ಅವುಗಳ ನಿಜಪ್ರಮಾಣದಲ್ಲಿಯೇ ಮತ್ತು ನಿಜರೂಪದಲ್ಲಿಯೇ ನೋಡು ವೆವು. ಹೀಗೆ ನೋಡುವುದಕ್ಕೆ ಮನಸ್ಸೇ ಮುಖ್ಯಕಾರಣವೆಂದು ಹೇಳುವರು.

ಗುಡ್ಡೆಯ ಒಳಭಾಗದಲ್ಲಿ ಪಪೆಯ ಹಿಂದೆ ಎರಡು ಕಡೆಯೂ ಉಬ್ಬಿದ ಫಲಕವಿದೆ. ಇದಕ್ಕೆ ಕಣ್ಮಣಿಯೆಂದು ಹೆಸರು. ಇದರ ಮುಂದೆ ಜಲಧಾತುವೂ ಹಿಂದೆ ಕಾಚ ಧಾತುವೂ ಇವೆ. ಈ ಧಾತುಗಳೂ ಕಣ್ಮಣಿಯೂ ಪಾರದರ್ಶಕವಾದವು. ಕಣ್ಮಣಿಗೆ ಅಂಟಿಕೊಂಡಿರುವ ಕಟ್ಟುಗಳು ಅದನ್ನು ಒಂದು ನಿರ್ದಿಷ್ಟವಾದ ಸ್ಥಾನದಲ್ಲಿ ನಿಲ್ಲಿಸುವುದಕ್ಕೂ ಬೇಕಾದಾಗ ಉಬ್ಬಿ

ಸುವುದಕ್ಕೂ ಕುಗ್ಗಿಸುವುದಕ್ಕೂ ಸಹಾಯಕವಾಗಿವೆ. ಉಬ್ಬು ವುದೂ ಕುಗ್ಗುವುದೂ ವಸ್ತುಗಳಿಂದ ಬಂದ ಬೆಳಕಿನ ಕಿರಣಗಳನ್ನು ಬಾಗಿಸಿ ಅವು ಜಾಲಪಟಲದ ಮೇಲೆಯೇ ಸಂಗಮಬಿಂದುವಿಗೆ ಬರುವಂತೆ ಮಾಡುವುದಕ್ಕೆ. ಹೀಗೆ ಸಂಗಮ ಬಿಂದುವಿಗೆ ಬೆಳಕಿನ ಕಿರಣಗಳು ಬರುವುದರಿಂದ ವಸ್ತುವಿನ ಪ್ರತಿಬಿಂಬವು ಜಾಲಪಟಲದ ಮೇಲೆಯೇ ಬಿದ್ದು ವಸ್ತುವು ಸ್ಪಷ್ಟವಾಗಿ ಕಾಣುತ್ತದೆ. ಅದರ ಹಿಂದೆ ಅಥವಾ ಮುಂದೆ ಬಿದ್ದರೆ ವಸ್ತುವು ಸ್ಪಷ್ಟವಾಗಿ ಕಾಣಿಸುವುದಿಲ್ಲ. ಬೆಳಕಿನ ಕಿರಣಗಳನ್ನು ಜಾಲ ಪಟಲದ ಮೇಲೆಯೇ ಸಂಗಮಬಿಂದುವಿಗೆ ತರಲು ಫಲಕದಲ್ಲಿ ಆಗುವ ಉಬ್ಬುತಗ್ಗುಗಳ ವ್ಯತ್ಯಾಸಕ್ಕೆ ಸಂಧಾನಕಾರ್ಯವೆಂದು ಹೆಸರು. ಇದೇ ಕಣ್ಣಿಗಿರುವ ಸಂಧಾನಸಾಮರ್ಥ್ಯ. ದೂರದಲ್ಲಿ ರುವ ವಸ್ತುಗಳನ್ನು ನೋಡುವಾಗ ಈ ಸಂಧಾನಕಾರ್ಯದ ಆವಶ್ಯಕತೆ ಇರುವುದಿಲ್ಲ. ಅವುಗಳಿಂದ ಬರುವ ಕಿರಣಗಳು ಸಮಾನಾಂತರವಾಗಿರುವುದರಿಂದ ವಸ್ತುಗಳ ಬಿಂಬವು ಜಾಲ ಪಟಲದ ಮೇಲೆಯೇ ಸರಿಯಾಗಿ ಸಂಗಮಬಿಂದುವಿಗೆ ಬರು ವುದು. ಆದರೆ ಹತ್ತಿರದಲ್ಲಿರುವ ವಸ್ತುಗಳಿಂದ ಬರುವ ಕಿರಣ ಗಳು ಸಮಾನಾಂತರವಾಗಿರದೆ ಅವು ಮುಂದುವರಿದಂತೆಲ್ಲ ಅವು ಗಳ ಅಂತರವು ಹೆಚ್ಚುತ್ತಾಹೋಗುವುದರಿಂದ ಅವುಗಳಿಂದುಂಟಾ ಗುವ ಪ್ರತಿಬಿಂಬವು ಜಾಲಪಟಲದ ಹಿಂದೆ ಬಿದ್ದು ವಸ್ತುಗಳು ಮಂಜಾಗಿ ಕಾಣುವುವು. ಇಂಥ ಸಂದರ್ಭಗಳಲ್ಲಿ ವಸ್ತು ಗಳನ್ನು ವಿಶದವಾಗಿ ಕಾಣಿಸುವಂತೆ ಮಾಡಲು ಫಲಕವು ಹೆಚ್ಚು ಉಬ್ಬಾಗಬೇಕಾಗುವುದು. ಆದರೂ ಈ ಉಬ್ಬುವ ಶಕ್ತಿಗೂ ಒಂದು ಮಿತಿ ಇದೆ. ವಸ್ತುಗಳು ಕಣ್ಣಿಗೆ 5-6 ಅಂಗುಲಗಳ ಹತ್ತಿರ ಬರುವತನಕ ಫಲಕಕ್ಕೆ ತನ್ನ ಕಾರ್ಯ ನಿರ್ವಹಿಸಲು

ಸಾಧ್ಯ. ಅದಕ್ಕಿಂತ ಹತ್ತಿರ ವಸ್ತುವಿದ್ದರೆ ಫಲಕವು ಸಂಧಾನ
ದಿಂದ ತನ್ನ ಕಾರ್ಯವನ್ನು ಸಾಧಿಸಲಾರದು. ಫಲಕವು ಉಬ್ಬು
ವುದೂ ತಗ್ಗುವುದೂ ಪಾರ್ಶ್ವಿಕಾವಯವದ ಸ್ನಾಯುಗಳ
ಸಹಾಯದಿಂದ ಮತ್ತು ಸ್ವಂತ ಸ್ಥಿತಿಸ್ಥಾಪಕಶಕ್ತಿಯಿಂದ.
ಒಟ್ಟು ಗುಡ್ಡೆಯು ಚಲನಕ್ಕೆ ಕಾರಣವಾದ ಬೇರೆವಿಧವಾದ
ಸ್ನಾಯುಗಳಿವೆ. ಒಂದೊಂದು ಗುಡ್ಡೆಗೂ ಸ್ನಾಯುಗಳು ಆರು
ಆರು ಹತ್ತಿಕೊಂಡಿವೆ. ಈ ಆರಾರು ಸ್ನಾಯುಗಳೂ ಸಹಕರಿಸಿ
ಕೆಲಸಮಾಡುವುದರಿಂದ ನಾವು ಎರಡು ಕಣ್ಣುಗಳಿಂದ ಪದಾರ್ಥ
ವನ್ನು ನೋಡಿದರೂ ನೋಡಿದ ಪದಾರ್ಥವು ಮಾತ್ರ ಒಂದೇ
ಆಗಿ ಕಾಣಿಸುವುದು. ಯಾವುದಾದರೂ ಒಂದು ಕಣ್ಣಿನ
ಸ್ನಾಯುಗಳು ದುರ್ಬಲವಾಗಿ ಗುಡ್ಡೆಯನ್ನು ಸರಿಯಾಗಿ ತಿರು
ಗಿಸಲಾಗದಿದ್ದರೆ ಆ ಕಣ್ಣು ಮೆಳ್ಳೆಗಣ್ಣಾಗುವುದು.

---

# ೩. ಕಣ್ಣುನೋವು

ಮಾವಿನ ಹಣ್ಣನ್ನು ತಿಂದರೆ ಉಷ್ಣವಾಗಿ ಕಣ್ಣುನೋವು ಬರುತ್ತದೆಂದು ಜನಗಳಲ್ಲಿ ಸಾಧಾರಣವಾದ ಭಾವನೆಯಿದೆ. ಇದು ಮಾವಿನ ಹಣ್ಣಿನಿಂದ ಬರತಕ್ಕ ಕಾಯಿಲೆಯಲ್ಲ. ಮಾವಿನ ಹಣ್ಣಿನ ಕಾಲವೂ ಕಣ್ಣುನೋವು ಬರುವ ಕಾಲವೂ ಸಾಮಾನ್ಯವಾಗಿ ಸಂಧಿಸುವುದೇ ಈ ಭಾವನೆಗೆ ಕಾರಣ. ಕಣ್ಣುನೋವಿಗೆ ಕಾರಣ ಬಹು ಸೂಕ್ಷ್ಮವಾದ ಕೆಲವು ಕ್ರಿಮಿಗಳು. ಈ ಸೂಕ್ಷ್ಮ ಕ್ರಿಮಿಗಳು ಸಾಮಾನ್ಯವಾಗಿ ಎಲ್ಲರ ಕಣ್ಣಿನ ಅರಿಯಮೇಲೆ ಸ್ವಾಭಾವಿಕವಾಗಿ ನೆಲಸಿರುತ್ತವೆ. ಇವಕ್ಕೆ ಅನುಕೂಲವಾದ ಸಂದರ್ಭಗಳೊದಗಿದಾಗ—ಅಂದರೆ ಕಾಯಿಲೆ ಕಸಾಲೆಗಳು ಬಂದು ಶಕ್ತಿಗುಂದಿದಾಗ ಅಥವಾ ಕಣ್ಣಿಗೆ ಅಪಾಯ ಸಂಭವಿಸಿದಾಗ—ಇವು ಪ್ರಬಲಿಸಿ ರೋಗಕಾರಕವಾಗುವುವು. ಕಣ್ಣುನೋವು ಬಂದ ಮಕ್ಕಳ ಕರವಸ್ತ್ರ, ಟವಲು, ಹಾಸಿಕೆ ಹೊದಿಕೆಗಳನ್ನು ಇತರ ಮಕ್ಕಳು ಉಪಯೋಗಿಸಿದಾಗ, ಅಂಥ ಮಕ್ಕಳ ಜೊತೆಯಲ್ಲಿರುವಾಗ, ಅಥವಾ ಅಂಥ ಮಕ್ಕಳ ಕಣ್ಣಿನ ಪಿಸರಿನ ಮೇಲೆ ಕುಳಿತ ಗುಂಗಾಡಿಗಳು ಆರೋಗ್ಯವಾದ ಮಕ್ಕಳ ಕಣ್ಣುಗಳನ್ನು ಮುತ್ತಿದಾಗ, ಈ ರೋಗವು ಒಬ್ಬರಿಂದ ಮತ್ತೊಬ್ಬರಿಗೆ ಹರಡುತ್ತದೆ. ಒಟ್ಟಿನಲ್ಲಿ ರೋಗ ತಗುಲಿದ ಕಣ್ಣಿನಿಂದ ಸ್ರವಿಸುವ ದ್ರವ ಮತ್ತು ಗೀಜು ಮೇಲೆ ಹೇಳಿದ ಯಾವ ರೀತಿಯಿಂದಾಗಲಿ ಆರೋಗ್ಯವಾದ ಕಣ್ಣಿಗೆ ಸೇರಿದರೆ ಈ ರೋಗ ಅಲ್ಲಿ ವ್ಯಾಪಿಸುತ್ತದೆ.

ಕಣ್ಣು ರೇಗುವುದು ಅಥವಾ ಕೆಂಪಾಗುವುದು, ಹೆಚ್ಚಾಗಿ ನೀರು ಸುರಿಯುವುದು, ಬಿಗಿತ, ಚುಚ್ಚುವಿಕೆ, ಉರಿ, ಗೀಜು

ಕಟ್ಟುವುದು, ರೆಪ್ಪೆಗಳ ಊತ, ನಿದ್ರೆಯಾದಮೇಲೆ ರೆಪ್ಪೆಗಳು ಅಂಟಿಕೊಳ್ಳುವುದು ಇವೆಲ್ಲವೂ ಕಣ್ಣುನೋವಿನ ಚಿಹ್ನೆಗಳು.

ರೋಗ ಬಂದಮೇಲೆ ವಾಸಿಮಾಡಿಕೊಳ್ಳುವುದಕ್ಕಿಂತ ಅದು ಬಾರದಂತೆ ತಡೆಯುವುದು ಉತ್ತಮ. ಸ್ವಲ್ಪ ಜಾಗರೂಕವಾಗಿದ್ದರೆ ಇದನ್ನು ತಡೆಯಬಹುದು. ಕಣ್ಣುನೋವು ಬಂದ ಹುಡುಗರ ಬಟ್ಟೆಬರೆಗಳನ್ನು ಮಿಕ್ಕವರು ಉಪಯೋಗಿಸದಿರುವುದು, ಅಂಥವರ ಜೊತೆಯಲ್ಲಿ ಮಲಗದಿರುವುದು, ಕಣ್ಣಿಗೆ ಚಿಕಿತ್ಸೆ ನಡೆಸಿದ ಕೂಡಲೆ ಕೈಗಳನ್ನು ಚೆನ್ನಾಗಿ ತೊಳೆದುಕೊಳ್ಳುವುದು ಇವು ಕೆಲವು ಮುಂಜಾಗ್ರತೆಯ ಉಪಾಯಗಳು. ಈ ಉಪಾಯಗಳನ್ನು ಹೇಳುವುದು ಬಹಳ ಸುಲಭ; ಆದರೆ ಅವುಗಳನ್ನು ನಮ್ಮ ಮನೆಗಳಲ್ಲಾಚರಿಸುವುದು ಮಾತ್ರ ಸ್ವಲ್ಪ ಕಷ್ಟ.

**ಚಿಕಿತ್ಸೆ**—ಕಣ್ಣು ನೋವಿಗೆ ಕಾರಣವಾದ ಕ್ರಿಮಿಗಳು ಅರಿಯ ಮೇಲೆಯೇ ಇರುವುದರಿಂದ ಇದರ ಚಿಕಿತ್ಸೆ ಸುಲಭ. ಕಣ್ಣಿನಲ್ಲಿರುವ ಗೀಜನ್ನೂ ಕ್ರಿಮಿಗಳನ್ನೂ ಆಗಿಂದಾಗ್ಗೆ ಹೊರ ಹಾಕುವುದೇ ಚಿಕಿತ್ಸೆಯ ಮುಖ್ಯ ಗುರಿ. ದಿನಕ್ಕೆ 4-5 ಸಾರಿ ಬೋರಿಕ್ ದ್ರಾವಕದಿಂದ (ಒಂದು ಲೋಟ ಶುದ್ಧ ನೀರಿಗೆ ಒಂದು ಚಹಾ ಚಮಚದಷ್ಟು ಅಥವಾ ಒಂದು ರೂಪಾಯಿನ ಮೇಲೆ ನಿಲ್ಲುವಷ್ಟು ಬೋರಿಕ್ ಆಸಿಡ್ ಪುಡಿಯನ್ನು ಹಾಕಿದ ದ್ರಾವಕದಿಂದ) ಕಣ್ಣುಗುಡ್ಡೆಯನ್ನೂ ರೆಪ್ಪೆಗಳ ಒಳಭಾಗವನ್ನೂ ತೊಳೆಯುವುದು ನಾವು ಮನೆಗಳಲ್ಲಿ ಮಾಡಬಹುದಾದ ಚಿಕಿತ್ಸೆ.

ದ್ರಾವಕ ಸ್ವಲ್ಪ ಬೆಚ್ಚಗಿರಬೇಕಾದುದು ಅತ್ಯಾವಶ್ಯಕ. ಮಗುವನ್ನು ಮಲಗಿಸಿ ರೆಪ್ಪೆಗಳನ್ನು ಹಿಗ್ಗಿಸಿ ಹಿಡಿದುಕೊಂಡು, ಗುಡ್ಡೆಯನ್ನೂ ರೆಪ್ಪೆಯ ಒಳಭಾಗವನ್ನೂ ಕಶ್ಮಲವು ಪೂರ್ತಿಯಾಗಿ

ಹೊರಗೆ ಹೋಗುವವರೆಗೂ ಚೆನ್ನಾಗಿ ಬಿಡಿಸಿದ ಮತ್ತು ಶುಚಿಯಾದ ಹತ್ತಿಯಿಂದ ತೊಳೆಯಬೇಕು. ದ್ರಾವಕದಲ್ಲದ್ದಿರುವ ಹತ್ತಿಯನ್ನು ಕಣ್ಣಿನ ಮೇಲೆ ಹಿಂಡುವುದರಿಂದ ಕಣ್ಣನ್ನು ಚೆನ್ನಾಗಿ ತೊಳೆಯಬಹುದು. ಚಿಕಿತ್ಸೆಗೆ ಮೊದಲೂ ಆದಾದ ಮೇಲೂ ಕೈಯನ್ನು ಚೆನ್ನಾಗಿ ತೊಳೆದುಕೊಳ್ಳಬೇಕು. ರಾತ್ರಿ ಮಕ್ಕಳು ಮಲಗುವಾಗ ಕಾದು ಆರಿದ ವ್ಯಾಸ್ಲೈನನ್ನು ರೆಪ್ಪೆಗಳ ಅಂಚಿಗೆ ಸವರಬೇಕು. ಹೀಗೆ ಮಾಡಿದಲ್ಲಿ ರೆಪ್ಪೆಗಳು ಅಂಟಿಕೊಳ್ಳುವುದಿಲ್ಲ; ಕಣ್ಣಿನ ದ್ರವಗಳು ಕಣ್ಣಿನಲ್ಲಿ ನಿಲ್ಲದೆ ಸುರಿದು ಹೋಗಲು ಅನುಕೂಲವಾಗುವುದು.

ಕಣ್ಣಿಗೆ ಯಾವ ವಿಧವಾದ ಪಟ್ಟಿಯನ್ನೂ ಖಂಡಿತ ಕಟ್ಟಕೂಡದು. ಬೆಳಕಿಗೆ ಕಣ್ಣು ಬಿಡಲು ಸಾಧ್ಯವಿಲ್ಲದಿದ್ದರೆ ಬೆಳಕಿಗೆ ತಡೆಯಾಗಿ ಹಸುರು ಬಟ್ಟೆಯನ್ನೋ ಕನ್ನಡಕವನ್ನೋ ಉಪಯೋಗಿಸಬಹುದು. ಮಗುವು ಸಾಧ್ಯವಾದಷ್ಟುಕಾಲ ಹೊರಗೆ ಗಾಳಿಯಲ್ಲಿ ಇದ್ದರೆ ಒಳ್ಳೆಯದು.

ಈ ಚಿಕಿತ್ಸೆಯನ್ನು ಕ್ರಮವಾಗಿ ನಡೆಸಿದಲ್ಲಿ ಕೆಲವುದಿನಗಳಲ್ಲಿಯೇ ಕಣ್ಣುನೋವು ವಾಸಿಯಾಗುವುದು. ಈ ವ್ಯಾಧಿಗೆ ಈರುಳ್ಳಿಯ ರಸ, ಮೈಲುತುತ್ತದ ನೀರು, ಕಳ್ಳಿಯ ಹಾಲು ಇತ್ಯಾದಿಗಳನ್ನುಪಯೋಗಿಸುವ ವಾಡಿಕೆ ನಮ್ಮ ದೇಶದಲ್ಲಿ ಉಂಟು. ಇವು ಅನಾವಶ್ಯಕವಾದುವು. ಇವುಗಳಿಂದ ಕೆಲವು ವೇಳೆ ಕಣ್ಣಿಗೆ ಅಪಾಯವಾಗುವುದೂ ಉಂಟು.

ಬೇಗ ಗುಣವಾಗದಿದ್ದರೆ ಕಣ್ಣನ್ನು ತೊಳೆದ ಮೇಲೆ ದಿನಕ್ಕೊಂದುಸಲ 'ಆರ್‍ಜೈರಾಲ್' (Argyrol) ದ್ರಾವಕವನ್ನೋ ಪಟಿಕದ ನೀರನ್ನೋ 3-4 ತೊಟ್ಟುಗಳಷ್ಟು ಕಣ್ಣಿಗೆ ಹಾಕಬೇಕು.

ಆರ್‌ಜೈರಾಲ್ ದ್ರಾವಕವನ್ನುಪಯೋಗಿಸುವುದರಲ್ಲಿ ಒಂದು ಎಚ್ಚರಿಕೆಯ ಮಾತನ್ನು ಹೇಳಬೇಕಾಗಿದೆ. ಕೆಲವು ಸಂದರ್ಭಗಳಲ್ಲಿ ಇವಕ್ಕೆ ಬದಲು ಟಿಂಚರ್ ಅಯೋಡೀನ್ (Tr. Iodine) ಅಥವಾ ಅದೇ ಬಣ್ಣವುಳ್ಳ ಇತರ ದ್ರಾವಕವನ್ನು ಅಜಾಗರೂಕತೆಯಿಂದ ಉಪಯೋಗಿಸಿ ಕಣ್ಣು ಕಳೆದುಕೊಂಡಿರುವ ದೃಷ್ಟಾಂತಗಳು ಅನೇಕವಿವೆ. ಕಣ್ಣಿಗೆ ಔಷಧಿ ಹಾಕುವ ವಿಚಾರದಲ್ಲಿ ಇಂಥ ಅಜಾಗರೂಕತೆಗೆ ಸ್ವಲ್ಪವೂ ಅವಕಾಶ ಕೊಡದಂತೆ ನೋಡಿಕೊಳ್ಳಬೇಕು. ಇದಕ್ಕಾಗಿ ಕಣ್ಣಿನ ಔಷಧಿಯನ್ನು ಪ್ರತ್ಯೇಕವಾಗಿಡಬೇಕು. ಮತ್ತು ಅಂಥ ಔಷಧಿಯನ್ನು ಉಪಯೋಗಿಸುವುದಕ್ಕೆ ಮುಂಚೆ ಸೀಸೆಯ ಮೇಲಿನ ಚೀಟಿಯನ್ನೋದಿ ಅದು ಖಂಡಿತವಾಗಿ ಆರ್‌ಜೈರಾಲ್ ದ್ರಾವಕವೇ ಎಂಬುದನ್ನು ನಿರ್ಧರಮಾಡಿಕೊಳ್ಳಬೇಕು.

ಈ ವ್ಯಾಧಿಯ ಜೊತೆಯಲ್ಲಿ ಬಿಳಿಯ ಕರಿಯ ಗುಡ್ಡೆಗಳು ಸಂಧಿಸುವ ಅಂಚಿನಲ್ಲಿ "ಶುಕ್ಲ" ವು (Phlyctmule) ಕೆಲವು ಸಲ ಕಂಡುಬರುವುದು. ಇದರ ದಪ್ಪ ಸುಮಾರು ಸಾಸುವೆಕಾಳಿನಷ್ಟು. ಇದರ ಬಣ್ಣ ಬಿಳುಪು ಅಥವಾ ಹಳದಿ. ಇದನ್ನು ಕಂಡಾಗ ಜನರು ಬಹಳ ಗಾಬರಿಗೊಳ್ಳುವರು. ಸುಲಭ ಚಿಕಿತ್ಸೆಯಿಂದ ಇದು ನಿವಾರಣೆಯಾಗಬಹುದಾದುದರಿಂದ ಅಷ್ಟೊಂದು ಭೀತಿಗೆ ಕಾರಣವಿಲ್ಲ. ದಿನಕ್ಕೆ 2-3 ಸಾರಿ ಹಳದಿಯ ಮುಲಾಮನ್ನು (Yellow ointment) ಹೆಸರುಕಾಳಿನಷ್ಟು ಬೆಂಕಿಕಡ್ಡಿಯಕೊನೆಯಲ್ಲಿ ತೆಗೆದುಕೊಂಡು ಕೆಳರೆಪ್ಪೆಯ ಒಳಭಾಗದಲ್ಲಿಟ್ಟು ಕಣ್ಣನ್ನು ಮುಚ್ಚಿ ಮೆತ್ತಗೆ ರೆಪ್ಪೆಗಳನ್ನುಜ್ಜಿದರೆ ಜಾಗ್ರತೆಯಾಗಿ ಶುಕ್ಲವು ಮಾಯವಾಗುವುದು.

---

# ೪. ಮೇಹದ ಕಣ್ಣುನೋವು

ಇದರ ಚಿಕಿತ್ಸೆ ಮನೆಯಲ್ಲಿ ಸಾಧ್ಯವೇ ಇಲ್ಲ. ಅಲ್ಲದೆ ಈ ಕಣ್ಣುನೋವು ಕಾಣಿಸಿಕೊಂಡ ತತ್‌ಕ್ಷಣವೇ ಸ್ವಲ್ಪವೂ ಕಾಲ ವಿಳಂಬವಿಲ್ಲದೆ ನಡೆಯಬೇಕು. ಆದುದರಿಂದ ನೋವು ಕಂಡ ತತ್‌ಕ್ಷಣವೇ ಇದಕ್ಕೆ ಆಸ್ಪತ್ರೆಗಳಲ್ಲಿ ಚಿಕಿತ್ಸೆಮಾಡಿಸದಿದ್ದರೆ ಬಹಳ ಪ್ರಮಾದವಾಗುವುದೆಂಬುದನ್ನು ಜನರು ಚೆನ್ನಾಗಿ ನೆನಪಿನಲ್ಲಿಟ್ಟು ಕೊಳ್ಳಬೇಕು. ಈ ವಿಚಾರದಲ್ಲಿ ಸ್ವಯಂ ಚಿಕಿತ್ಸೆಯೂ ಸಾವಧಾನವಾಗಿ ಚಿಕಿತ್ಸೆಗೆ ರೋಗಿಯನ್ನು ಕರೆದುಕೊಂಡು ಹೋಗುವುದೂ ಅನುಚಿತ. ಪ್ರಪಂಚದಲ್ಲಿ ಕುರುಡರ ಪೈಕಿ 30% ಮಂದಿ ಈ ಕಾಯಿಲೆಯಿಂದ ಕಣ್ಣನ್ನುಕಳೆದುಕೊಂಡಿರುತ್ತಾರೆ. ಇದರಿಂದ ಇದು ಎಷ್ಟು ಪ್ರಬಲವಾದ ಕಾಯಿಲೆ ಎಂಬುದು ವ್ಯಕ್ತವಾಗುತ್ತದೆ. ಆದರೂ ಆಸ್ಪತ್ರೆಗಳಲ್ಲಿ ಕ್ರಮವಾದ ಚಿಕಿತ್ಸೆಯಿಂದ ಈ ರೋಗವನ್ನು ವಾಸಿಮಾಡಿಕೊಳ್ಳಲು ಸಾಧ್ಯ. ಈ ರೋಗ ಬಂದ ಹೊಸದರಲ್ಲಿಯೇ ಸಾವಕಾಶಮಾಡದೆ ರೋಗಿ ಆಸ್ಪತ್ರೆಗೆ ಹೋಗಬೇಕಾದುದು ಅತ್ಯಾವಶ್ಯಕ. ಹಾಗೆ ಮಾಡದಿದ್ದರೆ ಕಣ್ಣು ಉಳಿಯುವುದು ಕಷ್ಟ.

ಈ ರೋಗ (ಜನನೇಂದ್ರಿಯದಿಂದ ಬಿಳುಪು ಹೋಗುವ) ಮೇಹಜಾಡ್ಯ ಪೀಡಿತರಾದವರಿಗೆ ಬರುತ್ತದೆ. ಇದರ ಕ್ರಿಮಿಗಳ (Gonococci) ಹಾವಳಿಯಿಂದ ಉತ್ಪತ್ತಿಯಾಗುವ ಕೀವನ್ನು ಬಿಳುಪೆಂದು ಕರೆಯುತ್ತಾರೆ. ಇಂಥ ಕೀವು ಯಾವ ರೀತಿಯಿಂದಾದರೂ ಕಣ್ಣಿಗೆ ಸೋಕಿದರೆ ಈ ವಿಧದ ಕಣ್ಣು ನೋವು ಉಂಟಾಗುತ್ತದೆ. ರೋಗಿಯ ಬೆರಳುಗಳಿಂದ ಮತ್ತು ಅವನು ಉಪಯೋಗಿಸುವ ಬಟ್ಟೆಬರೆಗಳಿಂದ ಸೊಂಕು ಅವನ

ಕಣ್ಣಿಗೆ ಅಥವಾ ಇತರರ ಕಣ್ಣುಗಳಿಗೆ ತಗುಲಬಹುದು. ಮನೆಯಲ್ಲಿರುವ ಆಳುಕಾಳುಗಳು ಮೇಹರೋಗದಿಂದ ಪೀಡಿತರಾಗಿದ್ದರೆ, ತಮ್ಮ ಕೈಯಿಂದಾಗಲಿ ಕರವಸ್ತ್ರದಿಂದಾಗಲಿ ಉಟ್ಟ ತೊಟ್ಟ ಬಟ್ಟೆಯಿಂದಾಗಲಿ ಯಜಮಾನರ ಮಕ್ಕಳ ಕಣ್ಣುಗಳನ್ನೊರಸುವುದರಿಂದ ಅರಿಯದ ಶಿಶುಗಳಿಗೂ ಈ ಘೋರವಾದ ಕಾಯಿಲೆಯನ್ನು ತಂದೊಡ್ಡಬಹುದು. ಇಂಥ ರೋಗಿಗಳನ್ನು ಚಿಕಿತ್ಸೆ ಮಾಡುವಾಗ ಕಣ್ಣಿನ ಕೀವು ಆಕಸ್ಮಾತ್ತಾಗಿ ಡಾಕ್ಟರುಗಳ ಕಣ್ಣಿಗೆ ಹಾರಿದರೆ ಡಾಕ್ಟರುಗಳಿಗೂ ವ್ಯಾಧಿ ಅಂಟುವುದು.

ಇದರ ಚಿಹ್ನೆಗಳು ಸಾಧಾರಣ ಕಣ್ಣುನೋವಿನ ಚಿಹ್ನೆಗಳನ್ನೇ ಹೋಲುವುದಾದರೂ, ಪ್ರತಿಯೊಂದು ಚಿಹ್ನೆಯೂ ಅತಿ ಉದ್ರೇಕವಾಗಿ ಕಾಣುವುದು. ಮೇಲಿನ ರೆಪ್ಪೆ ಊದಿ ಕೆಳಗಿನ ರೆಪ್ಪೆಯನ್ನು ಮುಚ್ಚಿಕೊಂಡಿರುವುದು; ಕಣ್ಣಿನಿಂದ ಕೀವು ಧಾರಾಕಾರವಾಗಿ ಸುರಿಯುವುದು; ನೋವು ವಿಪರೀತವಾಗಿರುವುದು; ದೇಹಸ್ಥಿತಿ ಕೆಟ್ಟು ಜ್ವರವೂ ತಲೆದೋರುವುದು. ಇಂಥ ಅತಿ ತೀವ್ರವಾದ ಚಿಹ್ನೆಗಳಿಂದಲೇ ಇದು ಸಾಮಾನ್ಯವಾದ ಕಣ್ಣುನೋವಲ್ಲವೆಂದು ಗುರುತಿಸಬಹುದು.

**ನಿವಾರಣೋಪಾಯ**—ಮೇಲೆ ಹೇಳಿದ ಮೇಹ ರೋಗದಿಂದ (Gonorrhoea) ಬಾಧೆ ಪಡುವವರು ತಮ್ಮ ಜನನೇಂದ್ರಿಯದಿಂದ ಬರುವ ಬಿಳುಪು ಯಾವರೀತಿಯಿಂದಲೂ ಕಣ್ಣಿಗೆ ಸೋಕದಂತೆ ನೋಡಿಕೊಳ್ಳಬೇಕು. ಜನನೇಂದ್ರಿಯವನ್ನಾಗಲಿ ಅದರ ಅಕ್ಕಪಕ್ಕವನ್ನಾಗಲಿ ಮುಟ್ಟಿದನಂತರ ಕೈಗಳನ್ನು ಚೆನ್ನಾಗಿ ಸಾಬೂನು ಹಾಕಿ ತೊಳೆದುಕೊಳ್ಳಬೇಕು. ಬಿಳುಪಿನಿಂದ ಮಲಿನವಾದ ಬಟ್ಟೆಗಳನ್ನು ಚೆನ್ನಾಗಿ ಶುಚಿಪಡಿಸಿ

ದಲ್ಲದೆ ಉಪಯೋಗಿಸಬಾರದು; ಮೈಯನ್ನೊರಸಿಕೊಂಡ ಬಟ್ಟೆಯಿಂದಲೇ ಮುಖವನ್ನೊರಸಿಕೊಳ್ಳಕೂಡದು. ಈ ಮೇಲಿನ ಸೂಚನೆಗಳಿಂದ ಅಂಥ ರೋಗಿಗಳ ಸಹವಾಸದಲ್ಲಿದ್ದಾಗ ಇತರರು ಯಾವರೀತಿ ಎಚ್ಚರಿಕೆಯಿಂದ ನಡೆದುಕೊಳ್ಳಬೇಕೆಂಬುದು ವ್ಯಕ್ತವಾಗುತ್ತದೆ.

ಇದೇ ಸಂದರ್ಭದಲ್ಲಿ ಮೇಹಜಾಡ್ಯವಿರುವ ತಾಯಿಯಿಂದ ಹುಟ್ಟಿದ ಮಕ್ಕಳಿಗೆ ಹೊಲೆಮನೆಯಲ್ಲಿಯೇ ಬರಬಹುದಾದ ಕಣ್ಣುನೋವನ್ನು ವಿವರಿಸುವುದು ಯುಕ್ತ. ಇದು ಮಕ್ಕಳಿಗೆ ಹುಟ್ಟಿದ ಮೂರುದಿನದಿಂದ ಆರು ದಿನಗಳೊಳಗಾಗಿ ಕಾಣಿಸಿಕೊಳ್ಳುವುದು; ಮಗುವಿನ ಎರಡು ಕಣ್ಣುಗಳೂ ಕೆಂಪಾಗುವುವು; ರೆಪ್ಪೆಗಳು ಬಾತುಕೊಳ್ಳುವುವು. ಕಣ್ಣಿನಿಂದ ಗಟ್ಟಿಯಾದ ಹಳದಿ ಕೀವು ಸುರಿಯುವುದು; ಮಗು ಕಣ್ಣು ಬಿಡುವುದಕ್ಕಾಗದೆ ನೋವಿನಿಂದ ಅಳುವುದು. ಇದು ಕಣ್ಣುಗಳಿಗೆ ಬಹು ಅಪಾಯಕರವಾದ ವ್ಯಾಧಿ. ಕಣ್ಣು ಕಳೆದುಕೊಂಡಿರುವ ಮಕ್ಕಳಲ್ಲಿ ಸೇಕಡ ಐವತ್ತು ಮಂದಿಗೆ ಕಣ್ಣು ಹೋಗಿರುವುದು ಈ ಕಾಯಿಲೆಯಿಂದಲೇ. ಇದು ಕರಿಯಗುಡ್ಡೆಯ ಮೇಲೆ ಹುಣ್ಣನ್ನು ಉಂಟುಮಾಡುವುದರಿಂದ ಕಣ್ಣಿನ ದೃಷ್ಟಿ ಕೆಡುವುದು ಅಥವಾ ಕಣ್ಣೇ ನಾಶವಾಗುವುದು. ಈ ಪರಿಣಾಮಗಳ ಸೂಚನೆಯಿಂದ ಈ ವ್ಯಾಧಿಯು ಎಷ್ಟು ಹಾನಿಕರವೆಂಬುದು ಮನದಟ್ಟಾಗದಿರಲಾರದು. ಆದ್ದರಿಂದ ಪ್ರತಿಯೊಬ್ಬ ತಾಯಿಯೂ ಈ ರೋಗ ತನ್ನ ಮಗುವಿಗೆ ಬಾರದಂತೆ ತಡೆಯುವ ಉಪಾಯವನ್ನು ತಿಳಿದಿರಬೇಕು.

ಈ ಕಣ್ಣು ವ್ಯಾಧಿಗೆ ತಾಯಿಯರಿಗಿರಬಹುದಾದ ಮೇಹಜಾಡ್ಯವೇ (Gonorrhoea) ಕಾರಣ. ಶಿಶುವು ಗರ್ಭಕೋಶ

ವನ್ನು ಬಿಟ್ಟು ಜನನ ಮಾರ್ಗದ್ವಾರಾ ಬರುವಾಗ ಅಲ್ಲಿರಬಹು
ದಾದ ಬಿಳುಪು ಮಗುವಿನ ಕಣ್ಣಿಗೆ ತಗುಲುವುದರಿಂದ ಮಗುವಿಗೆ
ಕಣ್ಣುನೋವು ಬರುವುದು. ಹಾಗೆ ಹುಟ್ಟುವಾಗಲೇ ಅದರ
ಕಣ್ಣಿಗೆ ಬಿಳುಪಿನ ಸೊಂಕು ತಗುಲದೆ ಇದ್ದರೂ, ಜನನವಾದ
ಮೇಲೆ ಶಿಶುವಿಗೆ ಮೈತೊಳೆಯುವಾಗ ಅದರ ದೇಹದ ಮೇಲಂ
ಟಿಕೊಂಡಿದ್ದ ಸೊಂಕು ಕಣ್ಣಿಗೆ ಸೇರಬಹುದು.

ಮಕ್ಕಳನ್ನು ಪಡೆದ ತಂದೆತಾಯಿಗಳೆಲ್ಲರೂ ತಮ್ಮ ಮಕ್ಕಳು
ಆರೋಗ್ಯವಾಗಿರಲಿ, ಅವರ ಕಣ್ಣು ಚೆನ್ನಾಗಿರಲಿ ಎಂದು ಆಶಿ
ಸುವುದು ಸ್ವಾಭಾವಿಕವಾದದ್ದೇ. ಆದರೆ ತಮಗೆ ಮೇಹರೋಗ
ವಿದ್ದರೆ ತಮಗಾಗುವ ಮಕ್ಕಳು ಕುರುಡರಾಗಬಹುದೆಂಬ ವಿವೇ
ಕವಿಲ್ಲದೆ ಎಷ್ಟೋ ದಂಪತಿಗಳು ಕೆಟ್ಟದಾರಿಗೆ ಬೀಳುತ್ತಾರೆ. ಈ
ಕಣ್ಣು ನೋವು ಬಾರದಂತೆ ತಡೆಯಲು, ಗರ್ಭಿಣಿಗೂ ಹುಟ್ಟಿದ
ಶಿಶುಗಳಿಗೂ ಯಾವ ಪ್ರತಿಕ್ರಿಯೆಯನ್ನು ನಡೆಸಬೇಕೆಂಬುದನ್ನು
ವಿವರಿಸುವುದು ಯುಕ್ತ.

1. ಮೇಹ ಜಾಡ್ಯವುಳ್ಳ ಗರ್ಭಿಣಿಯರು ಮರೆಮಾಚದೆ
ಪರೀಕ್ಷೆಮಾಡಿಸಿಕೊಂಡು ಜನನಕಾಲಕ್ಕೆ ಮುಂಚಿತವಾಗಿಯೇ
ರೋಗವನ್ನು ಗುಣಪಡಿಸಿಕೊಳ್ಳಬೇಕು.

2. ಶಿಶು ಜನಿಸಿದ ಕೂಡಲೆ, ಸಾಧ್ಯವಾದರೆ ಕಣ್ಣುಬಿಡು
ವುದಕ್ಕೆ ಮುಂಚಿತವಾಗಿಯೇ, ಅದರ ಕಣ್ಣುಗಳನ್ನು ಶುದ್ಧವಾದ
ಹತ್ತಿಯಿಂದ ಅಥವಾ ಬಟ್ಟೆಯ ಚೂರಿನಿಂದ ಒರಸಬೇಕು.
ಒಂದೊಂದು ಕಣ್ಣಿಗೂ ಬೇರೆ ಬೇರೆ ಚೂರುಗಳನ್ನುಪಯೋಗಿಸ
ಬೇಕು.

ಶಿಶುವನ್ನು ತೊಳೆಯುವಾಗ ಮೈತೊಳೆದ ಕೊಳೆಯ ನೀರಿನಿಂದ ಮುಖವನ್ನು ತೊಳೆಯಬಾರದು. ಮುಖ ತೊಳೆದ ಕೂಡಲೆ ರೆಪ್ಪೆಗಳನ್ನು ತೇವವಿಲ್ಲದಂತೆ ಒರಸಿ ಕಣ್ಣುಗಳಲ್ಲಿ ಒಂದೊಂದು ತೊಟ್ಟು ಸಿಲ್ವರ್‌ನೈಟ್ರೇಟ್ ದ್ರಾವಕವನ್ನು (1·/. Silver nitrate Solution) ಹಾಕಬೇಕು. ಈ ಪದ್ಧತಿಗೆ " ಕ್ರೀಡೆ " ಯವರ ಪದ್ಧತಿಯೆಂದು ಹೆಸರು. ಇದನ್ನಾಚರಿಸುವುದರಿಂದ ಎಷ್ಟೋ ಮಕ್ಕಳ ಕಣ್ಣುಗಳನ್ನು ಉಳಿಸಲು ಸಾಧ್ಯವಾಗಿದೆ. ಸುಶಿಕ್ಷಿತರಾದ ದಾದಿಯರು ಸಾಧಾರಣವಾಗಿ ಈ ಪದ್ಧತಿಯನ್ನಾಚರಿಸುತ್ತಾರೆ.

3. ಜನನವಾದ ಆರು ದಿನಗಳೊಳಗಾಗಿ ಮಗುವಿಗೆ ಕಣ್ಣು ನೋವು ಬಂದಲ್ಲಿ ತತ್‌ಕ್ಷಣ ಡಾಕ್ಟರ ಸಲಹೆಯನ್ನು ಪಡೆಯಬೇಕು.

4. ಇಂಗ್ಲೆಂಡಿನಲ್ಲಿ, ಜನನವಾದ ಮಕ್ಕಳನ್ನು 21 ದಿನಗಳ ವರೆಗೂ ನೋಡುತ್ತಿದ್ದು ಅಷ್ಟರೊಳಗಾಗಿ ಕಣ್ಣುನೋವು ಬಂದರೆ ಅದನ್ನು ವರದಿ ಮಾಡುವುದು ಸೂಲಗಿತ್ತಿಯ ಕರ್ತವ್ಯ.

---

# ೫. ಪೊರೆ

ಸುಮಾರು ೫೦ ವರ್ಷ ತುಂಬಿದವರು ಕಣ್ಣಿಗೆ ಪೊರೆ ಬಂದು ದೃಷ್ಟಿ ಕುಗ್ಗಿದೆಯೆಂದು ಹೇಳಿಕೊಳ್ಳುವುದುಂಟು. ವಯಸ್ಸಾದಮೇಲೆ ಕೆಲವರಿಗೆ ಕಣ್ಮಣಿಯ ಪಾರದರ್ಶಕತ್ವಕ್ಕೆ ಅವಿದಿತ ಕಾರಣಗಳಿಂದ ಕುಂದುಂಟಾಗಿ ಕ್ರಮೇಣ ಕಣ್ಣು ಕಾಣ ದಂತಾಗುತ್ತದೆ. ಹೀಗೆ ಪಾರದರ್ಶಕತ್ವವನ್ನು ಕಳೆದುಕೊಂಡ ಕಣ್ಮಣಿಯನ್ನೇ ಪೊರೆ ಎಂದು ಕರೆಯುವರು. ಹಿಂದೂಸ್ಥಾನಿ ಯಲ್ಲಿ ಇದಕ್ಕೆ ಪರದಾ ಎನ್ನುತ್ತಾರೆ. ಇದು ಬೆಳಕನ್ನು ಜಾಲಪಟಲದಮೇಲೆ ಬೀಳದಂತೆ ತಡೆಯುವುದರಿಂದ ಈ ಹೆಸ ರುಗಳು ಬಂದಿವೆ.

**ಚಿಹ್ನೆಗಳು**—ಪ್ರಾರಂಭದಲ್ಲಿ ಕಣ್ಣಿನ ಇದಿರಿನಲ್ಲಿ ಕರಿಯ ಚುಕ್ಕಿಗಳಿದ್ದಂತೆ ಕಾಣುವುದು. ಒಂದೊಂದು ಪದಾರ್ಥವೂ ಎರಡೆರಡಾಗಿ ಮೂರುಮೂರಾಗಿ ಕಾಣುವುದು. ಬರಬರುತ್ತಾ ದೃಷ್ಟಿ ಕುಗ್ಗಿ ಕೆಲವು ಅಡಿಗಳ ದೂರದಲ್ಲಿ ಹಿಡಿದ ಬೆರಳುಗಳನ್ನು ಎಣಿಸಲು ಕೂಡ ಶಕ್ತಿ ಇಲ್ಲದಂತಾಗುವುದು. ಕೈ ಚಲನವನ್ನು ಮಾತ್ರ ಅಥವಾ ಬೆಳಕನ್ನು ಮಾತ್ರ ಗ್ರಹಣಮಾಡುವ ಶಕ್ತಿ ಯುಳಿಯುತ್ತದೆ. ಒಂದು ಕಣ್ಣಿಗಿಂತ ಮುಂಚೆಯೇ ಇನ್ನೊಂದು ಕಣ್ಣಿನಲ್ಲಿ ಪೊರೆ ಬೆಳೆಯುವುದು.

**ಚಿಕಿತ್ಸೆ**—ಔಷಧಿಯಿಂದಾಗಲಿ ಇನ್ನಾವ ತರದ ಬಾಹ್ಯೋ ಪಚಾರದಿಂದಾಗಲಿ ಪೊರೆ ಕರಗುವುದಿಲ್ಲ. ಈಗಿರುವ ಶಾಸ್ತ್ರೀಯ ಜ್ಞಾನದಲ್ಲಿ ಪೊರೆಯ ಕಾರಣಗಳು ಸರಿಯಾಗಿ ವ್ಯಕ್ತಪಟ್ಟಿಲ್ಲವಾಗಿ, ಇದನ್ನು ತಡೆಯುವ ಯಾವ ಉಪಾ

ಯವೂ ಕಂಡುಬಂದಿಲ್ಲ. ಶಸ್ತ್ರ ಚಿಕಿತ್ಸೆಯಿಂದಲೇ ಇದು ನಿವಾರಣೆಯಾಗಬೇಕಾದದ್ದು. ಸಾಧಾರಣವಾಗಿ ಈ ಚಿಕಿತ್ಸೆಯನ್ನು ಪೊರೆ ಬಲಿತಮೇಲೆಯೇ ಮಾಡುತ್ತಾರೆ. ಪೊರೆ ಎಳಸಾಗಿರುವಾಗ ಛಾಯಾಕನ್ನಡಕಗಳನ್ನು ಉಪಯೋಗಿಸುವುದು ದೃಷ್ಟಿಗೆ ಸಹಕಾರಿಯಾಗುವುದು. ಪೊರೆಯುಳ್ಳವರು ಯಾವ ಹಿಡಿತಡೆಯೂ ಇಲ್ಲದೆ ಕಣ್ಣುಗಳನ್ನುಪಯೋಗಿಸಬೇಕು. ಪೊರೆಯು ಪೂರ್ತಿ ಬಲಿಯುವವರೆಗೂ ನಿರೀಕ್ಷಿಸದೆ ವಯಸ್ಸಾದವರು ಸ್ವಲ್ಪ ದೃಷ್ಟಿ ಮಂಜಾದ ಕೂಡಲೆ ವೈದ್ಯರಿಂದ ಪರೀಕ್ಷೆ ಮಾಡಿಸಿಕೊಂಡು ಸಲಹೆ ಪಡೆಯುವುದು ಉತ್ತಮ. ಏಕೆಂದರೆ ಮೊದಲು ಮೊದಲಲ್ಲಿ ಇವರ ಚಿಹ್ನೆಗಳು ದೀರ್ಘಕಾಲೀನವಾದ "ಗ್ಲಾಕೋಮ" (Glaucoma) ಎಂಬ ದೃಷ್ಟಿಗೆ ಹಾನಿಕರವಾದ ರೋಗವನ್ನು ಹೋಲುತ್ತವೆ. ಗ್ಲಾಕೋಮವೇ ಆದ ಪಕ್ಷದಲ್ಲಿ ಸರಿಯಾದ ಚಿಕಿತ್ಸೆಯನ್ನು ತತ್‍ಕ್ಷಣ ಕೈಕೊಳ್ಳಬೇಕಾಗಿರುತ್ತದೆ. ಹಾಗಲ್ಲದೆ ಪೊರೆಯಾದಲ್ಲಿ ಅದು ಬಲಿಯುವವರೆಗೂ ಕಾಯಬೇಕು.

ಪೊರೆ ತೆಗೆಸಿಕೊಳ್ಳುವುದಕ್ಕೆ ಚಿಕಿತ್ಸಕನನ್ನು ಆರಿಸಿಕೊಳ್ಳುವುದರಲ್ಲಿ ನಾವು ಬಹಳ ಜಾಗರೂಕರಾಗಿರಬೇಕು. ಪೊರೆ ತೆಗೆಯುತ್ತೇವೆಂದು ಬೀದಿಗಳಲ್ಲಿಯೂ, ಅಂಗಡಿಗಳ ಮುಂದುಗಡೆಯಲ್ಲಿಯೂ ಕುಳಿತುಕೊಂಡಿರುವ ವೈದ್ಯ ವೇಷಧಾರಿಗಳನ್ನು ವಿಷದಂತೆ ತ್ಯಜಿಸಬೇಕು. ಇವರು ಪೊರೆಯ ವಿಚಾರವಾಗಿ ಶಾಸ್ತ್ರೀಯವಾದ ತಿಳಿವಳಿಕೆ ಇಲ್ಲದೆ, ತಮ್ಮ ವಾಗಾಡಂಬರದಿಂದ ಜನಗಳನ್ನು ಮರುಳುಗೊಳಿಸಿ, ತಮ್ಮ ಚಿಕಿತ್ಸೆಯಿಂದ ಜನರ ಕಣ್ಣುಗಳನ್ನು ಹಾಳುಮಾಡುವರು. ಇಂಥವರಲ್ಲಿ ಚಿಕಿತ್ಸೆ ಹೊಂದಿದ ಬಹಳ ಜನಗಳು ಕಣ್ಣನ್ನು ಕಳೆದುಕೊಂಡದ್ದಲ್ಲದೆ

ಬಹುಕಾಲವವರೆಗೂ ಕಣ್ಣಿನ ಬಾಧೆಯಿಂದಲೂ ನರಳಿದ್ದಾರೆ. ಕೆಲವರು "ಈ ಚಿಕಿತ್ಸೆಯಿಂದಲೂ ಎಷ್ಟೋ ಜನರಿಗೆ ಗುಣವಾಗಿದೆಯಲ್ಲ" ಎಂದು ಕೇಳಬಹುದು. ಇದು ಅಕಸ್ಮಾತ್ತಾಗಿ ದೇವರ ಕೃಪೆಯಿಂದ ಆದ ಸೋಜಿಗ. ವೈದ್ಯನ ಚಿಕಿತ್ಸಾಚಾತುರ್ಯದಿಂದಾದ ಗುಣವಲ್ಲ. ಶಾಸ್ತ್ರೀಯವಾಗಿ ಶಸ್ತ್ರ ವೈದ್ಯರು ಹೇಗೆ ಪೊರೆಯನ್ನು ತೆಗೆಯುತ್ತಾರೆ ಮತ್ತು ಅಶಾಸ್ತ್ರೀಯವಾದ ರೀತಿಯಲ್ಲಿ ಚಿಕಿತ್ಸೆಮಾಡುವವರು ಹೇಗೆ ಮಾಡುತ್ತಾರೆಂಬ ವಿಷಯವನ್ನು ಗಮನಿಸಿದರೆ ಯಾವ ಚಿಕಿತ್ಸೆ ನಿರಪಾಯವಾದದ್ದು, ಯಾವುದಲ್ಲ ಎಂಬುದು ಸಿದ್ಧವಾಗುತ್ತದೆ.

ಶಾಸ್ತ್ರೀಯವಾಗಿ ಚಿಕಿತ್ಸೆ ನಡೆಸುವವರು ಶಸ್ತ್ರವನ್ನುಪಯೋಗಿಸುವುದಕ್ಕೆ ಮುಂಚೆ ಗುಡ್ಡೆ ಮತ್ತು ಉಪಾಂಗಗಳನ್ನು ಚೆನ್ನಾಗಿ ಶುಚಿಮಾಡಿ ಪೊರೆ ನುಗ್ಗುವುದಕ್ಕೆ ಎಷ್ಟು ಅಗಲ ಬೇಕೋ ಅಷ್ಟು ಮಾತ್ರ ಸೀಳಿ ಪೊರೆಯನ್ನೊತ್ತಿ, ಕೈಚಳಕದಿಂದ ಪೊರೆಯು ಹೊರಗೆ ಬರುವಂತೆ ಮಾಡುತ್ತಾರೆ. ಬೆಳಕಿಗೆ ಅಡ್ಡವಾಗಿದ್ದ ಪೊರೆಯನ್ನು ಹೊರಗೆ ತೆಗೆದುಹಾಕಿದ ಹಾಗಾಯಿತು.

ಅಶಾಸ್ತ್ರೀಯವಾಗಿ ಮಾಡುವ ಚಿಕಿತ್ಸೆಯನ್ನು "ಕೂಚಿಂಗ್" (couching) ಎಂದು ಕರೆಯುತ್ತಾರೆ. ಇದರಲ್ಲಿ ಪೊರೆಯನ್ನು ಹೊರಗೆ ತೆಗೆದುಹಾಕುವುದರ ಬದಲು, ಅದನ್ನು ಒಂದು ದಪ್ಪ ಸೂಜಿಯಿಂದ ಒಳಕ್ಕೆ ನೂಕಿಬಿಡುವರು. ಅದು ಗುಡ್ಡೆಯಲ್ಲಿ ಒಂದು ಪಕ್ಕಕ್ಕೆ ಬೀಳುವುದು. ಕೂಚಿಂಗ್ ಆದಕೂಡಲೆ ಕಣ್ಣು ಚೆನ್ನಾಗಿ ಕಾಣುವುದಾದರೂ, ಕೆಲವು ದಿವಸಗಳಲ್ಲಿಯೇ ನಾನಾವಿಧದ ನೇತ್ರವ್ಯಾಧಿಗಳು ಹುಟ್ಟುವುವು. ಶಾಸ್ತ್ರೀಯ ಪದ್ಧತಿಯಲ್ಲಿ ಗಾಯಕ್ಕೆ ವಿಷಕ್ರಿಮಿಗಳು ಸೇರದಂತೆ

ಎಲ್ಲ ವಿಧವಾದ ಎಚ್ಚರಿಕೆಯನ್ನು ತೆಗೆದುಕೊಳ್ಳುತ್ತಾರೆ. ಕೂಚಿಂಗ್ ಚಿಕಿತ್ಸೆ ನಡೆಸುವವರು ಕಣ್ಣನ್ನು ತೊಳೆಯುವುದಿಲ್ಲ. ಶಸ್ತ್ರವನ್ನು ಶುಚಿಮಾಡುವುದಿಲ್ಲ. ಸೂಜಿಯ ಮೂಲಕ ವಿಷ ಕ್ರಿಮಿಗಳು ಕಣ್ಣಿಗೆ ಸೇರಿ ಗುಡ್ಡೆಯೊಳಗೂ ಪ್ರವೇಶಿಸಿ ಅನಾಹುತವನ್ನುಂಟುಮಾಡುವವು. ಶಾಸ್ತ್ರೀಯ ಪದ್ಧತಿಯಲ್ಲಿ ಅಪಾರದರ್ಶಕವಾದ ಕಣ್ಮಣಿಯನ್ನು ಹೊರಗೆ ತೆಗೆದುಹಾಕುತ್ತಾರೆ. ಆದರಿಂದ ಇನ್ನೇನೂ ಅಪಾಯ ಸಂಭವಿಸುವಂತಿಲ್ಲ. ಕೂಚಿಂಗಿನಲ್ಲಿ ಕಣ್ಮಣಿಯನ್ನು ಗುಡ್ಡೆಯೊಳಗೇ ತಳ್ಳಿಬಿಡುವುದರಿಂದ ಕೆಲವು ಕಣ್ಣುವ್ಯಾಧಿಗಳಿಗೆ ಆಸ್ಪದವಾಗಬಹುದು. ಪೊರೆ ತೆಗೆಸಿದ ನಂತರ ಡಾಕ್ಟರ ಸಲಹೆಯಂತೆ ಕನ್ನಡಕವನ್ನುಪಯೋಗಿಸಬೇಕು.

---

# ೬. ದೃಷ್ಟಿನ್ಯೂನತೆಗಳು

ಈ ಕಾಲದಲ್ಲಿ ತರುಣತರುಣಿಯರು ಹೆಚ್ಚುಹೆಚ್ಚಾಗಿ ಕನ್ನಡಕಗಳನ್ನು ನಾಗರಿಕ ಪ್ರತಿಷ್ಠೆಗಾಗಿ ಅಥವಾ ಸೌಂದರ್ಯಪ್ರದರ್ಶನಕ್ಕಾಗಿ ಹಾಕಿಕೊಳ್ಳುತ್ತಾರೆಂದು ಜನಗಳು ಆಡಿಕೊಳ್ಳುವುದುಂಟು. "ಪೂರ್ವಕಾಲದಲ್ಲಿ ಕನ್ನಡಕಗಳನ್ನುಪಯೋಗಿಸುತ್ತಿರಲಿಲ್ಲ. ಈಗೇಕೆ ಇಷ್ಟು ಹೆಚ್ಚಾಗಿ ಉಪಯೋಗಿಸಬೇಕು?" ಎಂಬ ಆಕ್ಷೇಪಣೆಯೂ ಹುಟ್ಟಿದೆ. ಇದಕ್ಕೆ ಸಮಂಜಸವಾದ ಉತ್ತರವನ್ನು ಕೊಡಬಹುದು. ನಮ್ಮ ಜನಾಂಗದಲ್ಲಿ ಶಾಸ್ತ್ರೀಯ ರೀತಿಯಲ್ಲಿ ಶಿಕ್ಷಿತರಾದ ಡಾಕ್ಟರುಗಳು ಈಗೀಗ ಹೆಚ್ಚುತ್ತಿರುವುದರಿಂದ ಮತ್ತು ಆರೋಗ್ಯವಿಚಾರವಾಗಿ ಜನಗಳಲ್ಲಿ ಹೆಚ್ಚು ತಿಳಿವಳಿಕೆಯುಂಟಾಗಿರುವುದರಿಂದ ಹೆಚ್ಚು ಜನರು ತಮ್ಮ ಕಣ್ಣಿನ ಊನಗಳನ್ನು ಕನ್ನಡಕಗಳ ಮೂಲಕ ಪರಿಹರಿಸಿಕೊಳ್ಳಲು ಸಾಧ್ಯವಾಗಿದೆ. ಅವರು ಕನ್ನಡಕಗಳನ್ನುಪಯೋಗಿಸುವುದು ತಮ್ಮ ದೃಷ್ಟಿಯನ್ನು ಉತ್ತಮಪಡಿಸಿಕೊಳ್ಳುವುದಕ್ಕಾಗಿ, ಪೂರ್ಣವಾಗಿ ಕಣ್ಣಿನ ಆರೋಗ್ಯವನ್ನು ಕಾಪಾಡಿಕೊಳ್ಳುವುದಕ್ಕಾಗಿ; ವಿಡಂಬನಕ್ಕೋಸ್ಕರವಲ್ಲ. ಆದುದರಿಂದ ಆಧುನಿಕರಲ್ಲಿ ಕನ್ನಡಕದ ಉಪಯೋಗ ಹೆಚ್ಚಿರುವುದು ಸಂತೋಷಪಡಬೇಕಾದ ಮತ್ತು ಹೆಮ್ಮೆಪಡಬೇಕಾದ ವಿಷಯವೇ ಹೊರತು ಆಕ್ಷೇಪಣೆಗೆ ಗುರಿಯಾಗತಕ್ಕದ್ದಲ್ಲ.

ವಸ್ತು ಚೆನ್ನಾಗಿ ಕಾಣಬೇಕಾದರೆ ಕರಿಯಗುಡ್ಡೆಗೂ ಜಾಲಪಟಲಕ್ಕೂ ಒಂದು ನಿಷ್ಕೃಷ್ಟವಾದ ಅಂತರ (ಸುಮಾರು ಒಂದು ಅಂಗುಲ) ವಿರಬೇಕು. ಈ ಅಂತರವು ವ್ಯತ್ಯಾಸವಾದರೆ ದೃಷ್ಟಿನ್ಯೂನತೆಗಳುಂಟಾಗುವುವು. ಇದರಿಂದ ವಸ್ತುವಿನ ಪ್ರತಿ




ಚಿತ್ರ ೩. ಸರಿಯಾದ ನೋಟ

1. ಇಲ್ಲಿ ದೂರದ ವಸ್ತುವಿನ ಬಿಂಬವು ಜಾಲಪಟಲದ ಕೇಂದ್ರದಮೇಲೆ ಸರಿಯಾಗಿ ಬೀಳುತ್ತವೆ. ಇದು ಸರಿಯಾದ ದೃಷ್ಟಿಯನ್ನು ಉದಾಹರಿಸುತ್ತದೆ.

2. ಸಾಮಾನ್ಯವಾಗಿ ಹತ್ತಿರದಲ್ಲಿರುವ ವಸ್ತುಗಳಿಂದ ಬಂದ ಬಿಂಬವು ಜಾಲಪಟಲದ ಆಚೆ ಬೀಳುವುದು. ಇದನ್ನು ಜಾಲಪಟಲದ ಕೇಂದ್ರದ ಮೇಲೆ ಬೀಳಿಸಲು ಕಣ್ಮಣಿಯು ಸ್ವಾಭಾವಿಕವಾಗಿ ಉಬ್ಬುವುದು. ಇದನ್ನು ಚುಕ್ಕೆಯ ಗೀಟು ತೋರಿಸುತ್ತದೆ.

ಬಿಂಬವು ಜಾಲಪಟಲಕ್ಕಿಂತ ಸ್ವಲ್ಪ ಮುಂಭಾಗದಲ್ಲಿಯೋ ಅಥವಾ ಸ್ವಲ್ಪ ಹಿಂಭಾಗದಲ್ಲಿಯೋ ಬಿದ್ದು ಪದಾರ್ಥವು ವಿಶದ ವಾಗಿ ಕಾಣಿಸುವುದಿಲ್ಲ.

ಈ ದೃಷ್ಟಿನ್ಯೂನತೆಗಳು ಮೂರು ವಿಧವಾಗಿವೆ. (1) " ಸಮೀಪದೃಷ್ಟಿ" (Myopia) (2) " ದೂರದೃಷ್ಟಿ" (Hypermetropia) (3) ಬಿಂದುರಾಹಿತ್ಯನ್ಯೂನತೆ (Astigmatism).

**"ಸಮೀಪದೃಷ್ಟಿ"**—ಈ ನ್ಯೂನತೆಯಲ್ಲಿ ಸಮಾನಾಂತರ ಕಿರಣಗಳು ಜಾಲಪಟಲದ ಮುಂಭಾಗದಲ್ಲಿ ಸಂಗಮ ಬಿಂದುವಿಗೆ ಬರುವುವು. ಇದಕ್ಕೆ ಕಣ್ಣುಗುಡ್ಡೆ ಸ್ವಾಭಾವಿಕವಾ




ಚಿತ್ರ ೫

ಇಲ್ಲಿ ಕಣ್ಣಿನ ಗುಡ್ಡೆಯ ಉಬ್ಬು ಸಾಮಾನ್ಯವಾಗಿ ಇರಬೇಕಾದುದಕ್ಕಿಂತ ಹೆಚ್ಚಾಗಿದೆ. ಆದುದರಿಂದ ಇದರ ಮೂಲಕ ಹೋಗುವ ಕಿರಣಗಳು ವಸ್ತುವಿನ ಬಿಂಬವನ್ನು ಜಾಲಪಟಲದ ಮುಂದೆ ಬೀಳಿಸುತ್ತವೆ. ಆದುದರಿಂದ ವಸ್ತುವು ಸರಿಯಾಗಿ ಕಾಣಿಸುವುದಿಲ್ಲ. ಇಂಥ ಕಣ್ಣಿನವರಿಗೆ ಸಮೀಪವಸ್ತು ಮಾತ್ರ ಸರಿಯಾಗಿ ಕಾಣುವುದು.

ಗಿರುವುದಕ್ಕಿಂತ ಉದ್ದವಾಗಿರುವುದೇ ಕಾರಣ. ಈ ದೃಷ್ಟಿನ್ಯೂನತೆ ಇರುವವರಿಗೆ ದೂರದ ವಸ್ತುಗಳು ಸರಿಯಾಗಿ ಕಾಣುವುದಿಲ್ಲ. ಸಮೀಪವಸ್ತುಗಳು ಚೆನ್ನಾಗಿ ಕಾಣುತ್ತವೆ. ಇದು ಒಂದೇ ಇದರ ಚಿಹ್ನೆಯಾಗಿರಬಹುದು. ಇದರ ಜೊತೆಗೆ ಕೆಲವರಲ್ಲಿ ಸಮೀಪದ ಕೆಲಸಮಾಡಿದಮೇಲೆ ಕಣ್ಣಿಗೆ ಸ್ವಲ್ಪ ಕಸಿಬಿಸಿಯಾಗಿ, ಬೆಳಕಿಗೆ ಕಣ್ಣನ್ನು ಬಿಡಲು ಸಾಧ್ಯವಾಗುವುದಿಲ್ಲ. ಕಣ್ಣಿಗೆ ಕರಿಯ ಮಚ್ಚೆಗಳು ಮತ್ತು ಮಿಂಚುಗಳು ಹೊಳೆದ ಹಾಗೆ ಕಾಣುವುವು.

" ಸಮೀಪದೃಷ್ಟಿ " ನಾಗರಿಕತೆಯ ಫಲವಾಗಿದೆ. ಇದು ಆಜನ್ಮಸಿದ್ಧವಾಗಿರುವುದು ಅಪರೂಪ. ಬಹುಶಃ ಬಿಳಿಯ ಗುಡ್ಡೆಯ ಕವಚವು ದುರ್ಬಲವಾಗಿರಬಹುದು. ಓದುವುದು, ಬರೆಯುವುದು, ಹೊಲಿಯುವುದು ಮುಂತಾದ ಸಮೀಪ ಕೆಲಸಗಳಿಗೆ ಕಣ್ಣನ್ನು ಹೆಚ್ಚಾಗಿ ಉಪಯೋಗಿಸುವುದರಿಂದ ಈ ನ್ಯೂನತೆ ಬಲಿಯುತ್ತಾ ಹೋಗುತ್ತದೆ. ಸಮೀಪ ಕೆಲಸಗಳೆಲ್ಲಾ ಕಣ್ಣುಗುಡ್ಡೆಯನ್ನು ಉದ್ದವಾಗಿ ಮಾಡಿ, ಕರಿಯ ಗುಡ್ಡೆಗೂ ಜಾಲಪಟಲಕ್ಕೂ ಇರುವ ದೂರವನ್ನು ಹೆಚ್ಚಿಸುತ್ತವೆ.

**ಚಿಕಿತ್ಸೆ**—ಸರಿಯಾದ ಕನ್ನಡಕಗಳನ್ನು ಹಾಕಿಕೊಳ್ಳುವುದೇ ಇದಕ್ಕೆ ತಕ್ಕ ಚಿಕಿತ್ಸೆ. ಪೂರ್ಣ ದೃಷ್ಟಿಯನ್ನು ಹೊಂದಬೇಕಾದರೆ ಕನ್ನಡಕವನ್ನುಪಯೋಗಿಸಿದ ಹೊರತು ಬೇರೆ ಮಾರ್ಗವಿಲ್ಲ. ಕನ್ನಡಕಗಳು ವಸ್ತುವಿನ ಪ್ರತಿಬಿಂಬವನ್ನು ಜಾಲಪಟಲದ ಮೇಲೆ ಸರಿಯಾಗಿ ಬೀಳುವಂತೆ ಮಾಡುತ್ತವೆ. ಈ ನ್ಯೂನತೆಗೆ ನಿಮ್ನ ಮಸೂರದ (Concave lens) ಕನ್ನಡಕವನ್ನು ವಿಧಿಸುತ್ತಾರೆ. ಬಾಲ್ಯದಲ್ಲಿಯೇ ಈ ನ್ಯೂನತೆಯುಂಟಾದರೆ ಮಕ್ಕಳು ದೂರದ ವಸ್ತುಗಳನ್ನು ಚೆನ್ನಾಗಿ ನೋಡಲಾರದೆ ಬಾಹ್ಯಪ್ರಪಂಚದಲ್ಲಿ ಉತ್ಸಾಹವಿರುವುದಿಲ್ಲ. ಅವರ ಮಾನಸಿಕ ಆವರಣವು ಸಂಕುಚಿಸುತ್ತದೆ; ಅವರು ಅಂತರ್ಮುಖಿಗಳಾಗುವರು. ಓದು ಬರಹ ಮುಂತಾದ ಸಮೀಪ ಕೆಲಸಗಳಲ್ಲೇ ಹೆಚ್ಚು ಆಸಕ್ತಿ ತೋರಿಸುವರು. ಹೀಗೆಯೇ ಬಾಲ್ಯದಲ್ಲಿ ಬೆಳೆಯಲು ಬಿಟ್ಟುಬಿಟ್ಟರೆ ಮುಂದೆ ಚಿಕಿತ್ಸೆಗಾಗಿ ಕೂಡ ಇಂತಹ ಸಮೀಪ ಕೆಲಸಗಳನ್ನು ಬಿಡಿಸುವುದು ಕಷ್ಟಕರವಾಗುತ್ತದೆ.

ಆದ್ದರಿಂದ ಮಕ್ಕಳ "ಸಮೀಪ ದೃಷ್ಟಿ" ನ್ಯೂನತೆಯನ್ನು ಅಲಕ್ಷ್ಯಮಾಡದೆ ಅವರು ಸುಲೋಚನಗಳನ್ನು ಹಾಕಿಕೊಳ್ಳು ವಂತೆ ಮಾಡಬೇಕು. ಅಲ್ಲದೆ ಚಿಕ್ಕವರು ಈ ಕೆಳಗೆ ಕಂಡ ಕಣ್ಣಿನ ಆರೋಗ್ಯ ನಿಯಮಗಳನ್ನು ಅನುಸರಿಸಬೇಕು. ಹತ್ತಿರ ಕೆಲಸವನ್ನು ಸಾಧ್ಯವಾದಷ್ಟು ಕಡಿಮೆ ಮಾಡಬೇಕು. (ಮತ್ತು ಕೆಲಸವನ್ನು ಕಣ್ಣಿಗೆ ಸಾಧ್ಯವಾದಷ್ಟು ದೂರದಲ್ಲಿ ಹಿಡಿದು ಕೊಳ್ಳಬೇಕು). ಒಂದೇ ಸಮನಾಗಿ ಹೆಚ್ಚು ಹೊತ್ತು ಕೆಲಸ ಮಾಡದೆ ಆಗಾಗ ಕೆಲಸ ನಿಲ್ಲಿಸಿ ಕಣ್ಣಿಗೆ ವಿಶ್ರಾಂತಿ ಕೊಡ ಬೇಕು. ಕೆಲಸ ಮಾಡುವ ಸ್ಥಳದಲ್ಲಿ ಬೆಳಕು ಚೆನ್ನಾಗಿರಬೇಕು. ಬೆಳಕು ಕೆಲಸ ಮಾಡುವವನ ತಲೆಯ ಹಿಂದುಗಡೆ ಮತ್ತು ಪಕ್ಕದಿಂದ ಬೀಳುವಂತಿರಬೇಕು. ಮಲಗಿಕೊಂಡು ಓದುವು ದನ್ನೂ, ಕೆಲಸ ಮಾಡುವಾಗ ಹೆಚ್ಚಾಗಿ ಬಗ್ಗುವುದನ್ನೂ ನಿರೋಧಿಸಬೇಕು. "ಸಮೀಪ ದೃಷ್ಟಿ" ಹೆಚ್ಚುತ್ತಿದ್ದರೆ ಅಥವಾ ಕಣ್ಣು ಆಗಾಗ್ಗೆ ಕೆರಳುತ್ತಿದ್ದರೆ ಕಣ್ಣಿಗೆ ದೀರ್ಘಕಾಲ ವಿರಾಮ ಕೊಡಬೇಕು. ಒಳ್ಳೆಯ ವ್ಯಾಯಾಮವನ್ನೂ ರಸಾಯನ (Tonic) ಗಳನ್ನೂ ಕೊಡಿಸಬೇಕು. ಪಟ್ಟಣಗಳನ್ನು ಬಿಟ್ಟು ಹಳ್ಳಿಗಳಿಗೆ ಹವಾ ಬದಲಾವಣೆಗೆ ಹೋಗುವುದುತ್ತಮ.

"**ದೂರದೃಷ್ಟಿ**"—ವಸ್ತುಗಳಿಂದ ಪ್ರತಿಫಲಿಸಿ ಬರುವ ಸಮಾನಾಂತರ ಕಿರಣಗಳು ಜಾಲಪಟಲದ ಹಿಂಭಾಗದಲ್ಲಿ ಸಂಗಮವಾಗುವುದರಿಂದ ಅವು ಸರಿಯಾಗಿ ಕಾಣಿಸುವುದಿಲ್ಲ. ಕಣ್ಣಿನ ಗುಡ್ಡೆ ಚಿಕ್ಕದಾಗುವುದು ಅಥವಾ ಕರಿಯ ಗುಡ್ಡೆ, ಜಲಧಾತು, ಕಣ್ಮಣಿ, ಕಾಚಧಾತು ಇವುಗಳಲ್ಲಿ ವ್ಯತ್ಯಾಸಗಳಾ ಗುವುದು—ಇವು ಈ ನ್ಯೂನತೆಯ ಮುಖ್ಯವಾದ ಕಾರಣಗಳು.




ಚಿತ್ರ ೪

ಇಲ್ಲಿ ಕಣ್ಣಿನ ಗುಡ್ಡೆಯು ಸ್ವಾಭಾವಿಕವಾಗಿ ಇರಬೇಕಾದಷ್ಟು ಉಬ್ಬಾಗಿರುವುದಿಲ್ಲ. ಆದುದರಿಂದ ಇದರ ಮೂಲಕ ಹೋಗುವ ಕಿರಣಗಳು ದೂರದ ವಸ್ತುವಿನ ಬಿಂಬವನ್ನು ಜಾಲಪಟಲದ ಆಚೆ ಬೀಳಿಸುತ್ತವೆ. ಆದುದರಿಂದ ಪದಾರ್ಥವು ಸರಿಯಾಗಿ ಕಾಣುವುದಿಲ್ಲ.

"ಸಮೀಪ ದೃಷ್ಟಿ" ಯಲ್ಲಿ ಕಣ್ಣುಗುಡ್ಡೆ ಉದ್ದವಾಗಿರುವುದು. "ದೂರದೃಷ್ಟಿ" ಯಲ್ಲಿ ಅದು ಚಿಕ್ಕದಾಗಿರುವುದು.

ಆರೋಗ್ಯವಾಗಿದ್ದಾಗ ಚಿಕ್ಕವರಲ್ಲಿ ಈ ನ್ಯೂನತೆಯ ಚಿಹ್ನೆಗಳಿಗೆ ಆಸ್ಪದವಿಲ್ಲದಿರಬಹುದು. ಆದರೆ ಅವರು ದುರ್ಬಲರಾದಾಗ, ಅಥವಾ ಹೆಚ್ಚಾಗಿ ಹತ್ತಿರದ ಕೆಲಸ ಮಾಡಿದಾಗ ಈ ಚಿಹ್ನೆಗಳು ತಲೆದೋರುವುವು. ಇವನ್ನು 'ಕಣ್ಣಿನ ಆಲಸಿಕೆ' ಎಂದು ಕರೆಯಬಹುದು. ಕಣ್ಣುಗಳು ಉರಿಯುವುದು, ದ್ರವರಹಿತವಾಗಿರುವುದು, ಅಥವಾ ಕಣ್ಣೀರು ಹೆಚ್ಚಾಗಿ ಸುರಿಯುವುದು, ಅರಿಯೂ ರೆಪ್ಪೆಗಳ ಅಂಚೂ ಕೆಂಪಾಗುವುದು, ರೆಪ್ಪೆಗಳ ವಿಷಬು, ಇತ್ಯಾದಿಗಳು ಆಲಸತೆಯ ಚಿಹ್ನೆಗಳು. ಓದುವುದು, ಬರೆಯುವುದು ಮುಂತಾದ ಹತ್ತಿರದ ಕೆಲಸಗಳನ್ನು ಅದರಲ್ಲೂ ದೀಪದ ಬೆಳಕಿನಲ್ಲಿ ಮಾಡಿದನಂತರ ಇವು ಗೋಚರವಾಗು

ತ್ತವೆ. ಹೆಚ್ಚು ಹತ್ತಿರ ಕೆಲಸ ಮಾಡಿದರೆ ತಲೆನೋವು ಕಾಣಿಸಿಕೊಳ್ಳುವುದು. ಕೆಲವರಲ್ಲಿ ಈ ಯಾವ ಚಿಹ್ನೆಗಳೂ ಕಾಣದೆ ಹತ್ತಿರದ ಕೆಲಸವನ್ನು ದೂರ ದೂರ ಹಿಡಿದುಕೊಳ್ಳ ಬೇಕಾಗುವುದೇ ಇದರ ಮೊದಲನೆಯ ಚಿಹ್ನೆ. ವಯಸ್ಸಾದವ ರಲ್ಲಿ ' ದೂರದೃಷ್ಟಿ ' ಗ್ಲಾಕೋಮಾ ರೋಗಕ್ಕೆ ಸಹಕಾರಿ ಕಾರ ಣವಾಗಬಹುದು.

**ಚಿಕಿತ್ಸೆ**—ಇದಕ್ಕೂ ಸಹ ಕನ್ನಡಕವನ್ನುಪಯೋಗಿಸುವುದೇ ಸರಿಯಾದ ಚಿಕಿತ್ಸೆ. ಡಾಕ್ಟರುಗಳು ಹುಡುಗ ಹುಡುಗಿಯರನ್ನು ಪಾಠಶಾಲೆಗಳಲ್ಲಿ ಪರೀಕ್ಷಿಸುವಾಗ ಈ ನ್ಯೂನತೆಯು ಇರುವಂತೆ ಕಂಡರೂ, ಅದರ ನಿರ್ದಿಷ್ಟವಾದ ಚಿಹ್ನೆಗಳಿಲ್ಲದಿದ್ದರೆ ಕನ್ನಡಕ ವನ್ನುಪಯೋಗಿಸಬೇಕೆಂದು ಒತ್ತಾಯಮಾಡುವುದಿಲ್ಲ; ಚಿಹ್ನೆ ಗಳಿದ್ದರೆ ಕೂಡಲೇ ಸುಲೋಚನಗಳನ್ನು ಧರಿಸಬೇಕು. ಈ ನ್ಯೂನತೆಯಲ್ಲಿ ಪೀನಮುಸೂರ(convex lens)ಕನ್ನಡಕವನ್ನು ವಿಧಿಸುತ್ತಾರೆ. " ದೂರದೃಷ್ಟಿ" ಯಲ್ಲಿ ಕನ್ನಡಕವನ್ನು ಆಗಾಗ್ಗೆ ಬದಲಾಯಿಸಬೇಕಾದ್ದರಿಂದ ಡಾಕ್ಟರುಗಳ ಸಲಹೆಯಂತೆ ನಡೆದು ಕೊಳ್ಳಬೇಕು.

**" ಬಿಂದುರಾಹಿತ್ಯನ್ಯೂನತೆ "** (Astigmatism)— ಈ ನ್ಯೂನತೆಯಲ್ಲಿ, ಅಡ್ಡಲಾಗಿರುವ ಗೀಟುಗಳು ಸರಿಯಾಗಿ ಕಂಡರೆ ಅದೇ ಸ್ಥಳದಲ್ಲಿ ನೆಟ್ಟಗಿರುವ ಗೀಟುಗಳು ಸರಿಯಾಗಿ ಕಾಣುವುದಿಲ್ಲ. ಅಥವಾ ನೆಟ್ಟಗಿರುವ ಗೀಟುಗಳು ಸರಿಯಾಗಿ ಕಂಡರೆ ಅಡ್ಡಲಾಗಿರುವುವು ಸರಿಯಾಗಿ ಕಾಣುವುದಿಲ್ಲ. ಈ ನ್ಯೂನತೆ ಇರುವವರ ಕರಿಯಗುಡ್ಡೆ ಕಣ್ಮಣಿ ಇತ್ಯಾದಿಗಳು ಗೋಳಾಕಾರವಾಗಿರುವುದಿಲ್ಲವಾದ್ದರಿಂದ ಇವುಗಳ ಮೂಲಕ

ಬಂದ ಬೆಳಕಿನ ಕಿರಣಗಳು ಒಂದು ಸಂಗಮಬಿಂದುವನ್ನು ಸೇರುವುದಿಲ್ಲ. ಈ ಕೊರತೆಯು ಸಾಧಾರಣವಾಗಿ ಕರಿಯ ಗುಡ್ಡೆಯಲ್ಲಿರುತ್ತದೆ. ಇದು ಬಹುಶಃ ಆಜನ್ಮಸಿದ್ಧವಾದದ್ದು.

ಈ ನ್ಯೂನತೆಯು ಹೆಚ್ಚಾಗಿದ್ದರೆ ಹತ್ತಿರದ ವಸ್ತುಗಳಾಗಲಿ ದೂರದ ವಸ್ತುಗಳಾಗಲಿ ಸರಿಯಾಗಿ ಕಾಣಿಸುವುದಿಲ್ಲ. ಇಂಥ ವರು ತಲೆನೋವಿನಿಂದ ಆಗಾಗ್ಗೆ ನರಳುತ್ತಾರೆ. ಅರೆತಲೆನೋವು ಕಾಣಬಹುದು. ಇದರಲ್ಲಿ 'ಸಕ್ರಮ' 'ಅಕ್ರಮ' ಎಂದು ಎರಡು ವಿಧವಾದ ನ್ಯೂನತೆಗಳಿವೆ (Simple and Mixed Astigmatism). ಮೊದಲನೆಯದನ್ನು ಕನ್ನಡಕ ದಿಂದ ಪೂರ್ತಿಯಾಗಿ ತಿದ್ದಬಹುದಾದ್ದರಿಂದ ಅದನ್ನು ಮಾತ್ರ ಇಲ್ಲಿ ವಿವರಿಸಿದೆ.

**ಚಿಕಿತ್ಸೆ**—ಇದಕ್ಕೆ ಸ್ತಂಭಾಕೃತಿಯ (Cylindrical) ಗಾಜಿನ ಕನ್ನಡಕವನ್ನು ಡಾಕ್ಟರುಗಳು ಸೂಚಿಸುತ್ತಾರೆ. ಇದ ರಿಂದ ಬೆಳಕಿನ ಕಿರಣಗಳು ಒಂದೇ ಸಂಗಮ ಬಿಂದುವಿನಲ್ಲಿ ಬಂದು ಸೇರಿ ಪದಾರ್ಥಗಳು ಸರಿಯಾಗಿ ಕಾಣುವಂತಾಗುವುದು.

"**ಚಾಳೀಸ**" (Presbyopia)—ಇದು ದೃಷ್ಟಿಮಾಂ ದ್ಯವೇ ಹೊರತು ದೃಷ್ಟಿ ನ್ಯೂನತೆಯಲ್ಲ. ಇದು ಕಣ್ಣಿನ ಸಂಧಾನ ಸಾಮರ್ಥ್ಯವು ಕಡಿಮೆಯಾಗುವುದರ ಪರಿಣಾಮ. ಇದು ಶೈಶವ ದಿಂದಲೇ ಕಣ್ಮಣಿಯಲ್ಲಿ ನಿಧಾನವಾಗಿ ಮತ್ತು ಸ್ವಾಭಾವಿಕವಾಗಿ ಆಗುವ ಬದಲಾವಣೆಯ ಪರಿಣಾಮ. ಚಾಳೀಸ್ ಎಂದರೆ 40 ಎಂದರ್ಥ. 40 ವರ್ಷಗಳಾದಮೇಲೆ ಗೋಚರವಾಗುವುದರಿಂದ ಇದಕ್ಕೆ ಈ ಹೆಸರು. ವಯಸ್ಸಾದ ಹಾಗೆಲ್ಲಾ ಕಣ್ಮಣಿಯ ಸ್ಥಿತಿಸ್ಥಾಪಕಶಕ್ತಿ ಕಡಮೆಯಾಗುತ್ತ ಬಂದು ಸಂಧಾನವಾಗ

ಬೇಕಾದಾಗ ಅದು ಸಾಕಾದಷ್ಟು ಉಬ್ಬಿಕೊಳ್ಳುವುದಿಲ್ಲ. ಈ ಪರಿಸ್ಥಿತಿಗೆ ಪಾಕ್ಷ್ಮಿಕ ಸ್ನಾಯುವಿನ ಶಕ್ತಿ ಕುಗ್ಗುವುದೇ ಕಾರಣ. ಪಾಕ್ಷ್ಮಿಕ ಸ್ನಾಯುವಿನ ಸಂಕೋಚಾದಿಗಳು ಕಣ್ಮಣಿಯ ಉಬ್ಬರವಿಳಿತಗಳಿಗೆ ಒಂದು ಕಾರಣವೆಂದು ಈ ಮೊದಲೇ ಸೂಚಿಸಿದೆಯಷ್ಟೆ. ಅದನ್ನು ಜ್ಞಾಪಕಕ್ಕೆ ತಂದುಕೊಂಡರೆ ಈ ವಿಷಯವು ಸ್ಪಷ್ಟವಾಗುವುದು.

ಚಾಳೀಸದಿಂದ ಓದುವುದು, ಬರೆಯುವುದು, ಹೊಲಿಯುವುದು ಇಂಥ ಕೆಲಸಗಳು ಬರುಬರುತ್ತಾ ಕಷ್ಟವಾಗಿ, ಕೆಲಸವನ್ನು ಕಣ್ಣಿನಿಂದ ದೂರ ದೂರ ಹಿಡಿದುಕೊಳ್ಳಬೇಕಾಗುತ್ತದೆ.

"ಚಾಳೀಸ್" ಸಾಧಾರಣ ದೃಷ್ಟಿಯಿರುವವರಿಗಿಂತ "ದೂರ ದೃಷ್ಟಿ"ಯ ನ್ಯೂನತೆ ಇರುವವರಿಗೆ ನಲವತ್ತಕ್ಕಿಂತ ಮುಂಚೆಯೇ ಪ್ರಾಪ್ತವಾಗಬಹುದು. "ಸಮೀಪದೃಷ್ಟಿ" ಗಳಿಗೆ ಹೆಚ್ಚು ವಯಸ್ಸಾದ ಮೇಲೆ ಬರುತ್ತದೆ. "ಸಮೀಪದೃಷ್ಟಿ" ಬಹಳವಾದಲ್ಲಿ ಚಾಳೀಸ್ ಬರದಿರಬಹುದು.

**ಚಿಕಿತ್ಸೆ**—ಕನ್ನಡಕವನ್ನುಪಯೋಗಿಸುವುದೇ ಇದಕ್ಕೂ ಪ್ರತಿಕ್ರಿಯೆ. ಚಾಳೀಸ್ ವಯಸ್ಸಿನೊಡನೆ ಹೆಚ್ಚುವುದರಿಂದ 3-4 ವರ್ಷಗಳಿಗೊಂದಾವರ್ತಿ ಕಣ್ಣನ್ನು ಪರೀಕ್ಷೆ ಮಾಡಿಸಿಕೊಂಡು ಅವಶ್ಯವಿದ್ದಲ್ಲಿ ಕನ್ನಡಕವನ್ನು ಬದಲಾಯಿಸುತ್ತಿರಬೇಕು.

ಕನ್ನಡಕಗಳನ್ನು ತೆಗೆದುಕೊಳ್ಳುವುದರಲ್ಲಿ ಸ್ವಲ್ಪ ವಿವೇಚನೆ ಇರಬೇಕು. ನಮ್ಮಲ್ಲಿ ಕೆಲವರಿಗೆ ಕಣ್ಣನ್ನು ಪರೀಕ್ಷೆ ಮಾಡಿಸಿಕೊಂಡು ಕನ್ನಡಕವನ್ನು ತೆಗೆದುಕೊಳ್ಳಬೇಕೆಂಬ ತಿಳಿವಳಿಕೆ ಇಲ್ಲ. "ಎಂತಹುದೋ ಚೆನ್ನಾಗಿ ಕಂಡರೆ ಸಾಕು" ಎಂಬ

ಭಾವನೆಯ ಮೇಲೆ ಸ್ವಪರೀಕ್ಷೆಯಿಂದಲೇ ಗುಜರಿಯಲ್ಲಿಯೋ ಮನೆಯ ಬಳಿ ಮಾರಾಟಕ್ಕೆ ಬಂದವರಲ್ಲಿಯೋ ಕನ್ನಡಕವನ್ನು ಕೊಂಡುಕೊಳ್ಳುತ್ತಾರೆ. ಇನ್ನೂ ಕೆಲವರು ಹಿರಿಯರು ಬಿಟ್ಟು ಹೋದ ಕನ್ನಡಕವನ್ನು ಪ್ರೀತಿಯಿಂದ ಧರಿಸುತ್ತಾರೆ. ಇದು ಯಾವುದೂ ಸರಿಯಾದುದಲ್ಲ. ಕಣ್ಣನ್ನು ಶಾಸ್ತ್ರೀಯವಾಗಿ ಪರೀಕ್ಷಿಸಿದ ಹೊರತು ಯಾವರೀತಿಯ ಮಸೂರವನ್ನುಪಯೋಗಿಸಬೇಕು, ಎಷ್ಟು ಶಕ್ತಿಯುದನ್ನುಪಯೋಗಿಸಬೇಕು ಎಂಬುದು ಗೊತ್ತಾಗುವುದಿಲ್ಲ. ದೃಷ್ಟಿ ನ್ಯೂನತೆಗಳಲ್ಲಿ ಚಾಳೀಸನ್ನು ಪೂರ್ತಿಯಾಗಿ ತಿದ್ದಲು ಯಾವ ಶಕ್ತಿಯ ಕನ್ನಡಕಗಳು ಬೇಕೋ, ಅವುಗಳಿಗಿಂತ ಸ್ವಲ್ಪ ಹೆಚ್ಚು ಕಡಮೆ ಶಕ್ತಿಯುಳ್ಳ ಮಸೂರಗಳನ್ನುಪಯೋಗಿಸಿದರೂ ಚಾಳೀಸ ಬಂದಿರುವವರಿಗೆ ಅವುಗಳಿಂದ ಉಪಯೋಗವಾಗಬಹುದು. ಆದರೆ ಕನ್ನಡಕದ ಪೂರ್ಣ ಫಲವನ್ನು ಹೊಂದಿದಹಾಗಾಗುವುದಿಲ್ಲ. ಅದೂ ಅಲ್ಲದೆ ನ್ಯೂನತೆಗಳು ಮಿಶ್ರವಾಗಿರಬಹುದು. "ಬಿಂದುರಾಹಿತ್ಯ" ದ ಜೊತೆಗೆ ದೂರದೃಷ್ಟಿಯಾಗಲಿ ಸಮೀಪದೃಷ್ಟಿಯಾಗಲಿ ಸೇರಿಕೊಂಡಿರಬಹುದು. ಇಂಥ ಸನ್ನಿವೇಶಗಳಲ್ಲಿ ಓದುವುದಕ್ಕೆ ಸರಿಯಾದ ಕನ್ನಡಕವು ಇತರ ಎಲ್ಲಾಕಾರ್ಯಗಳಿಗೂ ಸರಿಹೋಗುತ್ತದೆಂದು ಹೇಳಲಾಗುವುದಿಲ್ಲ. ಅಲ್ಲದೆ ಮಸೂರವನ್ನು ಕಣ್ಣಿನಿಂದ ಎಷ್ಟು ದೂರದಲ್ಲಿರಿಸಬೇಕು, ಯಾವ ಕೋಣದಲ್ಲಿರಿಸಬೇಕು ಇತ್ಯಾದಿ ಸೂಕ್ಷ್ಮಾಂಶಗಳು ಗುಜರಿಯಲ್ಲಿ ಸ್ವಪರೀಕ್ಷೆಯಿಂದ ನಿರ್ಧರವಾಗುತ್ತವೆಯೇ? ಕೆಲವು ಗುಪ್ತ ನ್ಯೂನತೆಗಳು ಪರೀಕ್ಷೆಯಿಲ್ಲದೆ ಹೊರಬೀಳುವುದಿಲ್ಲ.

ಆದ್ದರಿಂದ "ಅಗ್ಗದ ಆಸೆಗೆ ಮುಗ್ಗಿದ ಜೋಳ" ಎಂಬ ಗಾದೆಯನ್ನು ನೆನಪಿನಲ್ಲಿಟ್ಟು ಕಣ್ಣನ್ನು ಶಾಸ್ತ್ರೀಯವಾಗಿ ಪರೀಕ್ಷೆ

ಮಾಡಿಸಿಕೊಂಡೇ ತದನುಸಾರ ಕನ್ನಡಕಗಳನ್ನು ಕೊಂಡುಕೊಳ್ಳುವುದು ಒಟ್ಟಿನಲ್ಲಿ ಅಗ್ಗವೂ ಮತ್ತು ನಿರ್ಬಾಧಕವೂ ಆಗಿದೆ.

## ಛಾಯಾ ಕನ್ನಡಕಗಳು

ಇವನ್ನು ಜನಗಳುಪಯೋಗಿಸುವುದು ಹೆಚ್ಚಾಗುತ್ತಿದೆ. ವಿಪರೀತ ಪ್ರಭೆಯಲ್ಲಿ ಅಥವಾ ಧೂಳಿರುವ ಕಡೆ ಕೆಲಸಮಾಡುವಾಗ ಇವನ್ನು ಹಾಕಿಕೊಳ್ಳುವುದು ಯುಕ್ತವಾಗಿದೆ. ಇದರಿಂದ ಹೆಚ್ಚು ಬೆಳಕಿನಿಂದಾಗಲಿ ಧೂಳಿನಿಂದಾಗಲಿ ಕಣ್ಣಿಗಾಗಬಹುದಾದ ಅಪಾಯವನ್ನು ತಡೆಯಬಹುದು. ಕನ್ನಡಕದ ಗಾಜುಗಳು ಮಸೂರಗಳಾಗಿರದೆ ಚಪ್ಪಟೆಯಾದ ಗಾಜುಗಳಾಗಿರಬೇಕು. ಮಸೂರಗಳು ಶಕ್ತಿಯುಳ್ಳವಾದ್ದರಿಂದ ದೃಷ್ಟಿ ನ್ಯೂನತೆಗಳನ್ನುಂಟುಮಾಡಬಹುದು. ಛಾಯಾ ಕನ್ನಡಕಗಳನ್ನು ಕೂಡ ಪರೀಕ್ಷೆ ಮಾಡಿಸಿ ಅವುಗಳು ಮಸೂರಗಳಲ್ಲವೆಂದು ನಿರ್ಧರ ಮಾಡಿಕೊಂಡು ತೆಗೆದುಕೊಳ್ಳಬೇಕು. ('ಒಂದೂವರಾಣೆಮೇ' 'ಎರಡೂವರಾಣೆಮೇ' ಅಂಗಡಿಗಳಲ್ಲಿ ಮಾರುವ ಛಾಯಾ ಕನ್ನಡಕವನ್ನು ತೆಗೆದುಕೊಳ್ಳುವುದು ಹಾನಿಕರ). ಈ ಛಾಯಾ ಕನ್ನಡಕಗಳನ್ನು ಬೆಳಕಿಗೆ ಕಣ್ಣನ್ನು ಬಿಡಲಾಗದ ಕೆಲವು ವ್ಯಾಧಿಗಳಲ್ಲಿ ಉಪಯೋಗಿಸಬಹುದು.

———

## ೭. ಇತರ ವ್ಯಾಧಿಗಳು

**ರೆಪ್ಪೆಗಳ ವ್ಯಾಧಿಗಳು**—ರೆಪ್ಪೆಗಳ ವ್ಯಾಧಿಗಳು ಅನೇಕ ವಾಗಿದ್ದರೂ, ಮನೆಯಲ್ಲಿಯೇ ಚಿಕಿತ್ಸೆ ನಡೆಸಬಹುದಾದ ಕೆಲ ವನ್ನು ಮಾತ್ರ ಇಲ್ಲಿ ವಿವರಿಸಿದೆ.

ಅತಿಸಾಮಾನ್ಯವಾದದ್ದು ಕಣ್ಣುಕುಟಿಕೆ. ಇದು ರೆಪ್ಪೆಯ ಕೂದಲಿನ ಬೇರಿನಲ್ಲಿ ಉಂಟಾಗುವ ಕುರು. ಇದು ಗಟ್ಟಿಯಾದ ಬಾವಿನಂತೆ ಪ್ರಾರಂಭವಾಗಿ ಕೆಲವು ದಿನಗಳಲ್ಲಿಯೇ ಕೀವು ತುಂಬಿ ಒಡೆಯುತ್ತದೆ. ಪ್ರಥಮದಲ್ಲಿ ನೋವು ಬಹಳವಾಗಿ ರುತ್ತದೆ. ಕಣ್ಣುಕುಟಿಕೆಗಳು ಒಂದಾದಮೇಲೊಂದು ಪರಂ ಪರೆಯಾಗಿ ಬರುವುವು. ಇದಕ್ಕೆ ಬಹುಶಃ ಶರೀರಪ್ರಕೃತಿಯ (Constitution) ವ್ಯತ್ಯಾಸವೇ ಕಾರಣ.

**ಚಿಕಿತ್ಸೆ**—ಬಿಸಿಬಿಸಿಯಾಗಿ ಶಾಖಕೊಡುವುದರಿಂದ ನೋವು ಕಡಿಮೆಯಾಗುತ್ತದೆ. ಶಾಖದಿಂದಲೇ ಕಣ್ಣುಕುಟಿಕೆ ಇಂಗಿ ಹೋಗಬಹುದು, ಇಲ್ಲವೇ ಬೇಗ ಪಕ್ವವಾಗುವುದು. ಪಕ್ವ ವಾದಮೇಲೆ ತಾನಾಗಿಯೇ ಒಡೆಯುವುದು. ಹಾಗೆ ಒಡೆಯ ದಿದ್ದರೆ ಶಸ್ತ್ರಚಿಕಿತ್ಸೆಯನ್ನು ಮಾಡಿಸಬೇಕು. ಕುಟಿಕೆಗಳು ಒಂದಾದಮೇಲೊಂದೇಳುತ್ತಿದ್ದರೆ ದೇಹದ ಆರೋಗ್ಯದ ಕಡೆಗೆ ದೃಷ್ಟಿ ಕೊಡಬೇಕು. ಭೇದಿ ಔಷಧಿಯನ್ನು ತೆಗೆದುಕೊಳ್ಳ ಬೇಕು ಮತ್ತು ರಸಾಯನಗಳನ್ನು ಸೇವಿಸಬೇಕು.

**ರೆಪ್ಪೆಯ ವಿಷಬು**—ಇದು ರೆಪ್ಪೆಯ ಅಂಚುಗಳಿಗೆ ಬರುವ ವಿಷಬು. ರೆಪ್ಪೆಯ ಕೂದಲುಗಳ ಬೇರಿನಲ್ಲಿ ಸಣ್ಣಸಣ್ಣ ಕೀವು ಗುಳ್ಳೆಗಳೆದ್ದು ಹುಣ್ಣಾಗಿ ಮೇಲೆ ಹೊಕ್ಕು ಕಟ್ಟುತ್ತವೆ. ಈ

ಹೊಕ್ಕನ್ನು ತೆಗೆದರೆ ಇದರ ಜೊತೆಯಲ್ಲಿ ಕೂದಲು ಕಿತ್ತುಬರು ವುದು. ಹುಣ್ಣಿನಿಂದ ಕೂದಲಿನ ಬೇರುಗಳು ನಾಶವಾಗಿ ಅಲ್ಲಿ ಪುನಃ ಕೂದಲು ಬೆಳೆಯುವುದಿಲ್ಲ. ಈ ವ್ಯಾಧಿಯು ಕಣ್ಣು ನೋವಿನ ಜೊತೆಯಲ್ಲಿಯೇ ಇರಬಹುದು. ಒಂದಕ್ಕೊಂದು ಕಾರಣವಾಗಿಯೂ ಪರಿಣಾಮವಾಗಿಯೂ ಬರಬಹುದು.

**ಚಿಕಿತ್ಸೆ**—ಇದನ್ನು ಉಪೇಕ್ಷೆಮಾಡದೆ ಚಿಕಿತ್ಸೆಮಾಡಿಸ ಬೇಕು. ಪ್ರತಿನಿತ್ಯವೂ ಬೆಳಗ್ಗೆ ಬಿಸಿನೀರಿನಿಂದಾಗಲಿ ಸೋಡಾ ಉಪ್ಪುಹಾಕಿದ ನೀರಿನಿಂದಾಗಲಿ (Soda bicarb lotion) ರೆಪ್ಪೆಯಂಚನ್ನು ನೆನೆಯಿಸಿ ಹೊಕ್ಕನ್ನು ಬಿಡಿಸಿ ತೆಗೆ ಯಬೇಕು. ಅನಂತರ ಒರಸಿ ಹಳದಿ ಮುಲಾಮನ್ನು ರೆಪ್ಪೆ ಯಂಚಿಗೆ ಚೆನ್ನಾಗಿ ಹಚ್ಚಬೇಕು.

## ಕಣ್ಣೀರು ಚೀಲದ ವ್ಯಾಧಿ

ಗೊತ್ತಾದ ಯಾವ ಕಾರಣವೂ ಇಲ್ಲದೆ ಕಣ್ಣೀರು ಸುರಿಯು ತ್ತಿದ್ದರೆ ಉಪೇಕ್ಷೆಮಾಡದೆ ಕಣ್ಣನ್ನು ಪರೀಕ್ಷೆಮಾಡಿಸಬೇಕು. ಹೀಗೆ ಕಣ್ಣೀರು ಸುರಿಯುವುದಕ್ಕೆ ಅನೇಕ ಕಾರಣಗಳಿವೆ. ಅದ ರಲ್ಲಿ ಮುಖ್ಯವಾದುದು ಚೀಲದ ಕಾಯಿಲೆ. ಇದರಲ್ಲಿ ಕೀವಾ ಗುವ ಸಂಭವವೂ ಉಂಟು. ಇದು ಬಂದಾಗ ಒಳಕುಣಿಕೆಯ ಮೇಲ್ಭಾಗದಲ್ಲಿ ಮೂಗಿನ ಬುಡದ ಪಕ್ಕದಲ್ಲಿ ಒಂದು ಕಡಲೆ ಕಾಳಿನಷ್ಟು ಗಾತ್ರವಿರುವ ಉಬ್ಬನ್ನು ನೋಡಬಹುದು. ಇದ ನ್ನೊತ್ತಿದರೆ ಕಣ್ಣೀರು ಅಥವಾ ಕೀವಿನಿಂದ ಮಿಶ್ರವಾದ ಕಣ್ಣೀರು ಗುಡ್ಡೆಯಮೇಲೆ ಹರಿದುಬರುವುದು. ಕರಿಯುಗುಡ್ಡೆಯ ಹುಣ್ಣು ಇದರಿಂದಾಗಬಹುದಾದ ಮುಖ್ಯ ಅಪಾಯ.

# ೮. ಕಣ್ಣಿಗೆ ಆಗಬಹುದಾದ ಅಪಾಯಗಳು

ಕಣ್ಣುಗಳಿಗೆ ಸಾಧಾರಣವಾಗಿ ಅಪಾಯವಾಗದಂತೆ ರೆಪ್ಪೆಗಳಿಂದಲೂ ಕಣ್ಣಿನ ಎಲುಬಿನ ಗೂಡಿನಿಂದಲೂ ರಕ್ಷಣೆ ಒದಗುತ್ತವೆ. ಆದರೂ ವಿಜಾತೀಯ ಪದಾರ್ಥಗಳು ಕಣ್ಣಿನೊಳಕ್ಕೆ ಬೀಳುವುದರಿಂದಲೂ, ಕಾರಗಳ ಕೆಲಸದಿಂದಲೂ, ಹರಿತವಿಲ್ಲದ ಆಯುಧಗಳಿಂದಾಗುವ ಮೂಕ ಪೆಟ್ಟಿನಿಂದಲೂ, ಹರಿತವಾದ ಆಯುಧಗಳಿಂದಾಗುವ ಗಾಯಗಳಿಂದಲೂ ಅಪಾಯ ಉಂಟು.

ವಿಜಾತೀಯ ಪದಾರ್ಥಗಳು ಅಂದರೆ ಧೂಳು, ಇದ್ದಿಲು, ಕಬ್ಬಿಣದ ಮತ್ತು ಕಲ್ಲಿನ ರವೆಗಳು, ಸಣ್ಣ ಸಣ್ಣ ಗುಂಗಾಡಿಗಳು ಮೊದಲಾದುವು ಅರಿಯಮೇಲಾಗಲಿ ಕರಿಯ ಗುಡ್ಡೆಯಮೇಲಾಗಲಿ ಬಿದ್ದು ತೊಂದರೆಕೊಡುವುವು.

ವಿಜಾತೀಯ ಪದಾರ್ಥವನ್ನು ಆದಷ್ಟು ಜಾಗ್ರತೆಯಾಗಿ ತೆಗೆದುಹಾಕಬೇಕು. ಕೆಳಗಿನ ರೆಪ್ಪೆಯಲ್ಲಿದ್ದರೆ, ರೆಪ್ಪೆಯನ್ನು ಕೆಳಕ್ಕೆಮಾಡಿ ಶುಚಿಯಾದ ಕರವಸ್ತ್ರದಿಂದ ಅದನ್ನು ತೆಗೆಯಬಹುದು. ವಿಜಾತೀಯ ಪದಾರ್ಥವು ಈ ಸ್ಥಳದಲ್ಲಿ ಕಂಡುಬರದಿದ್ದರೆ ಮೇಲಿನ ರೆಪ್ಪೆಯನ್ನು ತಿರುವಿದರೆ ಅಲ್ಲಿ ಗೋಚರವಾಗುವುದು. ಅಥವಾ ಕರಿಯಗುಡ್ಡೆ ಬಿಳಿಯ ಗುಡ್ಡೆಯಮೇಲೆ ಆದರಲ್ಲೂ ಒಳ ಅಥವಾ ಹೊರಕುಣಿಕೆಯ ಭಾಗದಲ್ಲಿರಬಹುದು. ಈ ಸ್ಥಳಗಳಲ್ಲಿಯೂ ಕರವಸ್ತ್ರದಿಂದ ತೆಗೆಯಬಹುದು. ಆದರೆ ಗುಡ್ಡೆಯಲ್ಲಿ ಹೊಕ್ಕಿರುವ ಯಾವ ವಿಜಾತೀಯ ವಸ್ತುವನ್ನೂ ಮನೆಯಲ್ಲಿ ತೆಗೆಯಲು ಖಂಡಿತ ಪ್ರಯತ್ನಪಡಬಾರದು.

ಕಾರಗಳು (Caustics : ಸುಣ್ಣ, ಆಮ್ಲ ಮುಂತಾದುವುಗಳು) ಬೆಂದ ಗಾಯಗಳನ್ನುಂಟುಮಾಡುತ್ತವೆ. ಸುಣ್ಣ ಅಥವಾ

ಗಾರೆ ಕಣ್ಣಿಗೆ ಬಿದ್ದಲ್ಲಿ ದೊಡ್ಡ ಹರಳುಗಳೆಲ್ಲವನ್ನೂ ಚೆನ್ನಾಗಿ ತೆಗೆದುಬಿಟ್ಟು ಅನಂತರ ಸಕ್ಕರೆಯ ನೀರಿನಿಂದ ಕಣ್ಣನ್ನು ತೊಳೆದು, ಹರಳೆಣ್ಣೆ, ಬೆಣ್ಣೆ ಅಥವಾ ಹಾಲನ್ನು ಕಣ್ಣಿಗೆ ಬಿಡಬೇಕು. ಬೆಂದ ಗಾಯವು ಆಮ್ಲಗಳಿಂದಾಗಿದ್ದರೆ ಸೋಡಾ ಉಪ್ಪಿನ ನೀರಿನಿಂದ (Soda Bicarb lotion) ಕಣ್ಣನ್ನು ತೊಳೆದು ಹರಳೆಣ್ಣೆಯನ್ನು ಕಣ್ಣಿಗೆ ಹಾಕಬೇಕು.

ಕಣ್ಣಿಗೆ ಮೂಗುಪೆಟ್ಟಾದಾಗ ರೆಪ್ಪೆಗಳು ಊದಿ ಕಣ್ಣು ಸುತ್ತಲೂ ಕಪ್ಪುಕಟ್ಟಿರುವುದು, ಅರಿ ಕೆಂಪಗಿರುವುದು. ಕಣ್ಣಿಗೆ ತಣ್ಣೀರಿನ ಒತ್ತುಕೊಡುವುದು, ಮತ್ತು ಬೋರಿಕ್‌ದ್ರಾವಕ ದಿಂದ ಕಣ್ಣನ್ನು ತೊಳೆಯುವುದು ಇದೇ ಇದಕ್ಕೆ ಚಿಕಿತ್ಸೆ.

ಪೆಟ್ಟು ಭಾರಿಯಾಗಿ ಬಿದ್ದು, ಬಾಧೆ ಹೆಚ್ಚಾಗಿದ್ದರೆ ತತ್‌ಕ್ಷಣ ವೈದ್ಯಸಹಾಯವನ್ನು ಹೊಂದಬೇಕು.

ಕರಿಯ ಗುಡ್ಡೆಯ ಹುಣ್ಣಿನ ವಿಚಾರದಲ್ಲಿ ಮನೆಯಲ್ಲಿ ಯಾವ ಚಿಕಿತ್ಸೆಯನ್ನೂ ನಡೆಸಲು ಸಾಧ್ಯವಿಲ್ಲವಾದುದರಿಂದ ಕೊನೆಯಲ್ಲಿ ವಿವರಿಸಲಾಗಿದೆ. ಕರಿಯ ಗುಡ್ಡೆಯಮೇಲೆ ಯಾವ ಹುಣ್ಣಾದರೂ, ತೆಳುವಾದ ಅಥವಾ ದಪ್ಪನಾದ ಕಲೆಯನ್ನು ಬಿಡದೆ ವಾಸಿಯಾಗುವುದು ಅಪರೂಪ. ಕಣ್ಣಿನ ಕಲೆಯನ್ನು ಹೂವು ಎಂದು ಕರೆಯುತ್ತಾರೆ. ಹುಣ್ಣನ್ನು ಚಿಕಿತ್ಸೆಮಾಡದೆ ಉಪೇಕ್ಷೆಮಾಡಿದಲ್ಲಿ ಕೆಲವು ವೇಳೆ ಕರಿಯಗುಡ್ಡೆ ಎಲ್ಲಾ ಕೊಳೆತುಹೋಗಿ ಕಣ್ಣು ಲೊತ್ತೆ ಬೀಳುವುದು. ಇಲ್ಲವೆ ಕರಿಯ ಗುಡ್ಡೆಯು ದುರ್ಬಲವಾಗಿ ಕಣ್ಣಿನ ಒಳಗಿನ ಒತ್ತಡದಿಂದ ವಪೆ ಯಿಂದ ಕೂಡಿ ಗಜ್ಜುಗದಂತೆ ಮುಂದಕ್ಕುಬ್ಬಿಕೊಳ್ಳುವುದು. ಇದನ್ನು ಕಣ್ಣಿನ ಕಾಯಿ ಎನ್ನುತ್ತಾರೆ. ಗಜ್ಜಿಗಗಣ ಎಂದು

ಹೇಳುವ ವಾಡಿಕೆಯೂ ಇದೆ. ಇಂಥವರ ಮುಖವು ವಿಕಾರವಾಗಿ ಕಾಣುವುದು. ದೃಷ್ಟಿಲಾಭಕ್ಕಲ್ಲದಿದ್ದರೂ ವಿಕಾರೋಪಶಮನಾರ್ಥವಾಗಿಯಾದರೂ ಕಾಯಿ ಇರುವವರು ಕೃತಕ ಕಣ್ಣುಗಳನ್ನು ಉಪಯೋಗಿಸುವುದು ಉಚಿತ.

ಈ ಹೂವು ಕಾಯಿಗಳಲ್ಲಿ ಕೊನೆಗಾಣುವ ಹುಣ್ಣುಗಳಿಗೆ ಆಸ್ಪದಕೊಡುವುವು ಸಿಡುಬು, ಮೇಹಜಾಡ್ಯಗಳು, ಗಾಯಗಳು ಇತ್ಯಾದಿಗಳು.

ಬಹು ಜನರು ಸಿಡುಬಿನಿಂದ ಕಣ್ಣನ್ನು ಹಾಳುಮಾಡಿಕೊಂಡಿದ್ದಾರೆ. ಸಿಡುಬು ಎದ್ದಾಗ ಯಾವ ಔಷಧಿಯನ್ನೂ ತೆಗೆದುಕೊಳ್ಳಕೂಡದು; ಅದರಿಂದ ಏನು ಪ್ರಯೋಜನ ಎಂಬ ಭಾವನೆಯು ನಮ್ಮವರಲ್ಲಿದೆ. ಸಿಡುಬು ಕಣ್ಣಿನಲ್ಲೆದ್ದರೂ ಅದೇ ರೀತಿ ಭಾವಿಸಿ ಯಾವ ಚಿಕಿತ್ಸೆಯನ್ನೂ ಮಾಡಿಸುವುದಿಲ್ಲ. ದೈಹಿಕ ಚಿಕಿತ್ಸೆ ಮತ್ತು ಉಪಚಾರದಿಂದ ಹೃದಯದ ದೌರ್ಬಲ್ಯ ಕಡಿಮೆಯಾಗಿ ರೋಗಿ ಗುಣಹೊಂದಬಹುದು. ಹಾಗೆಯೇ ಕಣ್ಣಿನ ಚಿಕಿತ್ಸೆ ಮಾಡುವುದರಿಂದ ಕರಿಯ ಗುಡ್ಡೆಯ ಮೇಲಿನ ಸ್ಫೋಟನದ ಹಾವಳಿಯು ಕಡಿಮೆಯಾಗಿ ದೃಷ್ಟಿ ಉಳಿಯಬಹುದು. ಡಾಕ್ಟರು ಸಿಕ್ಕಿದ ಪಕ್ಷದಲ್ಲಿ ಕಣ್ಣುಗಳನ್ನು ಬೋರಿಕ್ ದ್ರಾವಕದಿಂದ ದಿನಕ್ಕೆ ೨-೩ ಬಾರಿ ತೊಳೆಯಬೇಕು. ಕಣ್ಣಿಗೆ ಪಟ್ಟಿಯನ್ನು ಕಟ್ಟಕೂಡದು. ಆದರೆ ರೋಗವನ್ನು ವಾಸಿಮಾಡಿಕೊಳ್ಳುವುದಕ್ಕಿಂತ ರೋಗ ಬಾರದಹಾಗೆ ತಡೆಯುವುದೇ ಉತ್ತಮವೆಂಬ ತತ್ವವನ್ನು ಮರೆಯಬಾರದು. ಸಿಡುಬನ್ನು (ದೇವಿ) ಹಾಕಿಸಿಕೊಳ್ಳುವುದರಿಂದ ಸಿಡುಬು ರೋಗ ಬಾರದಂತೆ ತಡೆಯಬಹುದು. ಮಕ್ಕಳಿಗೆ ಮೂರು

ತಿಂಗಳಾದ ಕೂಡಲೆ ಸಿಡುಬು ಹಾಕಿಸಬೇಕೆಂಬುದು ಎಲ್ಲರಿಗೂ ತಿಳಿದ ವಿಷಯ.. ಆದರೆ ಸಿಡುಬಿನ ಉಪದ್ರವವು ಊರಿನಲ್ಲಿ ನೆಲಸಿರುವಾಗ ಇನ್ನೂ ಮುಂಚೆಯೇ ಹಾಕಿಸಬೇಕು. ದೊಡ್ಡವರು ಪುನಃ ಸಿಡುಬು ಹಾಕಿಸಿಕೊಳ್ಳಬೇಕು. (Re-vaccination). ಹೀಗೆ ಮಾಡುವುದರಿಂದ ಎಷ್ಟೋ ಕಣ್ಣುಗಳುಳಿಯಬಹುದು.

ರವೆಯುರಿಗಣ್ಣು (Trachoma)— ಇದು ಬಹು ದೀರ್ಘವಾದ ಕಾಯಿಲೆ. ಅನೇಕ ವೇಳೆ ಈ ವ್ಯಾಧಿಯಲ್ಲಿ ಕಣ್ಣು ರೇಗಿದ ಚಿಹ್ನೆಗಳಾವುವೂ ಇಲ್ಲವಾದರೂ, ಓದುವುದು ಬರೆಯುವುದು ಇತ್ಯಾದಿ ಸಮೀಪ ಕೆಲಸಗಳಿಂದ ಕಣ್ಣುಗಳು ಬಹು ಜಾಗ್ರತೆ ದಣಿಯುವುವು. ರೆಪ್ಪೆಯ ಒಳಮೈಯಲ್ಲಿ ಅರಿಯಮೇಲೆ ಸಣ್ಣಸಣ್ಣ ರವೆಕಾಳುಗಳು ಹಾಸಿದಂತೆ ಕಾಣುವುದು. ಆಗಾಗ್ಗೆ ಅರಿಗಣ್ಣಿನಂತೆ ಕಣ್ಣುನೋವನ್ನುಂಟುಮಾಡುವುದು. ಈ ರೋಗದಿಂದ ಕಣ್ಣಿಗೆ ವಿಧವಿಧವಾದ ಕೇಡುಂಟು. ಡಾಕ್ಟರ ಸಲಹೆ ತೆಗೆದುಕೊಂಡು ಚಿಕಿತ್ಸೆಯನ್ನು ಹೊಂದಬೇಕು.

ಗ್ಲಾಕೋಮ (Glaucoma)—ಕಣ್ಣಿನ ಒಳಗಡೆಯ ಒತ್ತಡವು ಹೆಚ್ಚಿ ಗ್ಲಾಕೋಮ ಎಂಬ ವ್ಯಾಧಿಯುಂಟಾಗುತ್ತದೆ. ಇದರ ಉಲ್ಬಣಾವಸ್ಥೆಯ ಚಿಹ್ನೆಗಳನ್ನು ನಾವು ತಿಳಿದಿದ್ದರೆ ಸಾಕು. ಒತ್ತಡವು ಹೆಚ್ಚಾದರೆ ಇದ್ದಕ್ಕಿದ್ದ ಹಾಗೆ ಕಣ್ಣು ಬಹಳ ನೋಯುವುದು. ತಲೆಯನೋವು ಬರುವುದು. ನೋವಿನ ಹೊಡೆತದಿಂದ ವಾಂತಿಯಾಗುವುದು. ಜ್ವರ ಕೂಡ ಬರಬಹುದು. ದೃಷ್ಟಿ ಜಾಗ್ರತೆಯಾಗಿ ಮಸಕಾಗುವುದು.

ಇಂಥ ಪ್ರಕರಣವು ಆಗಾಗ್ಗೆ ಸಂಭವಿಸಿ ದೃಷ್ಟಿ ನಾಶವಾಗು ವುದು. ಉಲ್ಬಣಾವಸ್ಥೆಗೆ ಬರುವ ಪೂರ್ವಭಾವಿಯಾಗಿ ಆಗಾಗ್ಗೆ ಕ್ಷಣಿಕವಾದ ದೃಷ್ಟಿಮಾಂದ್ಯ, ಬಣ್ಣಬಣ್ಣವಾದ ಬೆಳಕುಗಳು ಕಾಣುವುದು, ತಲೆನೋವು ಇತ್ಯಾದಿ ತಲೆದೋರುವುವು.

ಇದಕ್ಕೆ ಶಸ್ತ್ರಚಿಕಿತ್ಸೆಯೇ ವಿಹಿತ. ಆದರೂ ಆಸ್ಪತ್ರೆಗಳಲ್ಲಿ ಕೆಲವು ಔಷಧಗಳನ್ನುಪಯೋಗಿಸುವುದರಿಂದ ಕಣ್ಣಿನ ಒತ್ತಡ ವನ್ನು ತಾತ್ಕಾಲಿಕವಾಗಿ ಇಳಿಸಿ ನೋವನ್ನು ನಿವಾರಣೆ ಮಾಡುತ್ತಾರೆ.

# ೯. ಪರಿಸಮಾಪ್ತಿ

ಈ ಚಿಕ್ಕಪುಸ್ತಕದಲ್ಲಿ ಎಲ್ಲಾ ನೇತ್ರವ್ಯಾಧಿಗಳನ್ನೂ ವರ್ಣಿಸಲು ಸಾಧ್ಯವಿಲ್ಲ. ಎಲ್ಲರೂ ಸಾಧಾರಣವಾಗಿ ಗುರುತಿಸಬಹುದಾದ ಮತ್ತು ಮನೆಯಲ್ಲಿ ಚಿಕಿತ್ಸೆಮಾಡಬಹುದಾದ ಮತ್ತು ಮುಂಜಾಗ್ರತೆಯಿಂದ ನಿವಾರಿಸಲು ಸಾಧ್ಯವಾದ ವ್ಯಾಧಿಗಳನ್ನು ಮಾತ್ರ ಇಲ್ಲಿ ವಿವರಿಸಿದೆ.

ಮೇಲೆ ಹೇಳಿದ ವಿಷಯಗಳನ್ನು ಕ್ರೋಡೀಕರಿಸುವ ಒಂದು ಮಾತು. ನಮ್ಮ ದೇಶದಲ್ಲಿ ಕುರುಡಿಗೆ ಜನಗಳ ಮೌಢ್ಯವೇ ಮುಖ್ಯವಾದ ಕಾರಣ. (1) ಸಿಡುಬು ಮೋಹಜಾಡ್ಯಗಳನ್ನು ನಿವಾರಿಸಬಹುದಾದರೂ ಅವನ್ನು ತಡೆಯಲು ಯತ್ನಿಸದಿರುವುದು. (2) ಮತ್ತು ಅವು ಕಣ್ಣಿಗೆ ವ್ಯಾಪಿಸಿದಾಗಲೂ ಸರಿಯಾದ ಚಿಕಿತ್ಸೆಯನ್ನು ಸಕಾಲಕ್ಕೆ ಪಡೆಯದಿರುವುದು. (3) ಕಣ್ಣಿನಂತಹ ಸೂಕ್ಷ್ಮೇಂದ್ರಿಯಕ್ಕೂ ಯಾರೇನು ಔಷಧವನ್ನು ಹೇಳಲಿ ಅದನ್ನೆಲ್ಲಾ ಉಪಯೋಗಿಸುವುದು. (4) ರೋಗದ ಪ್ರಾರಂಭದಲ್ಲೇ ಸರಿಯಾದ ವೈದ್ಯರಲ್ಲಿಗೆ ಹೋಗದೆ ರೋಗವು ಉತ್ಕಟಾವಸ್ಥೆಗೆ ಬಂದಮೇಲೆ ಚಿಕಿತ್ಸೆಗೆ ಹೋಗುವುದು. ಇವೆಲ್ಲಾ ನಮ್ಮ ಮೌಢ್ಯದ ಫಲಗಳೇ.

ನಮ್ಮ ಗಡಿಯಾರ ಕೆಟ್ಟುಹೋದರೆ ಕಮ್ಮಾರನ ಹತ್ತಿರ ಸರಿಮಾಡಿಸಲು ತೆಗೆದುಕೊಂಡು ಹೋಗುವುದಿಲ್ಲ; ನಮ್ಮ ಅಜ್ಜಿಯ ಸಲಹೆಯನ್ನೂ ತೆಗೆದುಕೊಳ್ಳುವುದಿಲ್ಲ. ಗಡಿಯಾರದ ರಚನೆಯನ್ನು ಅರಿತು ದೋಷಗಳನ್ನು ಸರಿಮಾಡುವುದರಲ್ಲಿ ನಿಪುಣನಾದವನ ಬಳಿಗೆ ಅದನ್ನು ತೆಗೆದುಕೊಂಡು ಹೋಗುತ್ತೇವೆ.

ಆದರೂ ಗಡಿಯಾರಕ್ಕಿಂತ ಎಷ್ಟೋ ನಾಜೂಕಾದ ಕಣ್ಣಿಗೆ ಚಿಕಿತ್ಸೆಮಾಡಿಸಲು ಯಾರ ಸಲಹೆಯನ್ನಾದರೂ ಒಪ್ಪಿಕೊಂಡು ಬಿಡುತ್ತೇವೆ. ಬೀದಿಯಲ್ಲಿ ನೇತ್ರವೈದ್ಯರೆಂದು ಉದ್ಘೋಷಿಸಿ ಕೊಂಡು ಬರುವ ವೈದ್ಯವೇಷಧಾರಿಗಳ ವಶಕ್ಕೆ ಕಣ್ಣುಗಳನ್ನು ಒಪ್ಪಿಸುತ್ತೇವೆ.